# Antaranga

**Udipi, S. I.**

**ಸಂಪುಟ ೧.**
**ಸಂಚಿಕೆ ೧೬.**

೩೦ ಒಕ್ಟೋಬರ್ '೩೮
ಆದಿತ್ಯವಾರ.


# ಅಂತರಂಗ



## ಚಂದಾ ವಿವರ:

**ವಾರ್ಷಿಕ ಚಂದಾ ಮೂರು ರೂಪಾಯಿ.**

ವಿ. ಪಿ. ಕ್ರಮವಿಲ್ಲ. ಹಣವನ್ನು ಮುಂಗಡವಾಗಿ ಕಳುಹಬೇಕು.

**ಬಿಡಿ ಸಂಚಿಕೆ: ಒಂದಾಣೆ.**

ನಿಮ್ಮ ಊರಿನ ಏಜಂಟರಿಂದ ಪಡಕೊಳ್ಳಿರಿ.

## ಜಾಹಿರಾತಿನ ದರ:

| | | | | |
|---|---|---|---|---|
| ಇಡೀ | ಪುಟ | ರೂಪಾಯಿ | ೧೦—೦—೦ | ಒಂದು ಸರ್ತಿಗೆ. |
| ಅರ್ಧ | ,, | ,, | ೫—೦—೦. | ,, |
| ಕಾಲು | ,, | ,, | ೩—೦—೦ | ,, |
| ಅರೆಕಾಲು | ,, | ,, | ೨—೦—೦ | ,, |
| ಕಲಮು ಇಂಚಿಗೆ | ,, | ,, | ೧—೦—೦ | ,, |

## ಜಾಹಿರಾತು ಕೊಡುವವರಿಗೆ ಸಲಹೆ:

೧. ಜಾಹಿರಾತಿನ ವಿಷಯಗಳು ಅಯೋಗ್ಯವಾಗಿ ಕಂಡುಬಂದಲ್ಲಿ ಮುದ್ರಿಸಲಾಗುವುದಿಲ್ಲ.
೨. ಒಂದೇ ಬದಿಯಲ್ಲಿ ವಿವರವಾಗಿ ಬರೆಯಬೇಕು.
೩. ಬದಲಾವಣೆಯಿದ್ದರೆ ಒಂದು ವಾರ ಮುಂಚಿತವಾಗಿ ತಿಳಿಸಬೇಕು.
೪. ಬ್ಲೋಕುಗಳು ವಾಪಾಸು ಬೇಕಾದರೆ ಅವರವರ ಖರ್ಚಿನಿಂದಲೇ ವಾಪಾಸು ಪಡೆಯಬೇಕು.
೫. ಜಾಹಿರಾತಿನ ಬಾಬ್ತು ಹಣವನ್ನು ಮುಂಗಡವಾಗಿಯೇ ಕೊಡಬೇಕು.


ಮಾಲಕರು ಮುದ್ರಕರು ವ ಪ್ರಕಾಶಕರು:
**ಸಪ್ಲೈ ಏಜೆನ್ಸಿ ಲಿಮಿಟೆಡ್, ಉಡುಪಿ.**
ಮುದ್ರಣ ವ ಪ್ರಕಟನಾ ಸ್ಥಳ:
**ಮಣಿಪಳ ಪವರ್ ಪ್ರೆಸ್, ಮಣಿಪಳ, ಉಡುಪಿ.**

# ಅಂತರಂಗ

## ಸಿಹಿ ಃ ಃ ಃ ಃ ಃ ಕಹಿ

- ಮೌಲಾನಾ ಶೌಕತಾಲಿಯವರಿಗೆ ಬ್ರಿಟಿಷರ ಮಾಶಾಸನ !
- ಹಿಂದು-ಮುಸಲ್ಮಾನರ ಐಕ್ಯವನ್ನೊಡೆಯಲು ಮಿ| ಜಿನ್ನರು ಬ್ರಿಟಿಷರ ಏಜಂಟರಾಗುವರೆ?
- ಸುಳ್ಳಾಡುವ ಕಲೆಯಲ್ಲಿ ಬ್ರಿಟಿಷರಿಗಿರುವ ಸ್ಥಾನ.

ಂಂ ಡಾ| ಖರೆಯವರು ವೈದ್ಯಕೀಯ ವೃತ್ತಿಗೆ ವಿಶ್ರಾಂತಿ ಕೊಟ್ಟು, ಸಮೀಪದಲ್ಲಿರುವ ಜ್ಯೋತಿಷಿಗಳೊಡನೆ ತಮ್ಮ ಭವಿಷ್ಯವು ಹೇಗಿದೆಯೆಂಬುದನ್ನು ಕೇಳಿಕೊಳ್ಳುವುದುತ್ತಮವಿತ್ತು. ಕಾರಣ-ಗಾಂಧಿಜಿಯವರ ಸೂಚನೆಗಳನ್ನು ಅಲ್ಲಗಳೆದವರೆಲ್ಲರೂ ತಮ್ಮ ಸಾರ್ವಜನಿಕ ಜೀವನದ ಶಿಖರದಿಂದ ಕೆಳಗುರುಳಿ ಕೈಕಾಲು ಮುರಿದು ಕೊಂಡಿದ್ದಾರೆ. ಸರ್ ಶಂಕರನ್ ನಾಯರ್‌ರವರು "Gandhi and Anarchy" ಎಂಬ ಪುಸ್ತಕ ಬರೆದು ಧುರೀಣತೆಯ ಆಕಾಶದಿಂದ ತಾರೆಯಂತೆ ಉರುಳಿ, ಸಾರ್ವಜನಿಕಜೀವನದಲ್ಲಿ ಕೇವಲ ಒಂದು ಹೆಜ್ಜೆಯನ್ನಿಡಲು ಅವರು ಆ ಸೈಮನ್ ಕಮಿಷನಿನ ಮರೆ ಹೊಕ್ಕಬೇಕಾಯಿತು. ಸರ್. ನಾಯರರು ಸ್ವರ್ಗಸ್ಥರಾದಾರೂ ರಾಷ್ಟ್ರೀಯ ಪತ್ರಿಕೆಗಳು ಅವರು ಮಾಜಿ ಕಾಂಗ್ರೆಸ್ ಮುಖಂಡರೆಂಬುದನ್ನು ಕೂಡಾ ಮರೆತಿದ್ದುವು. ಧುರೀಣರೆಂದರೆ ತಾರುಣ್ಯದಲ್ಲಿರುವ ಸುಂದರಿಯರಂತೆ. ಪ್ರಾಯವಾದೊಡನೆ ಸುಂದರಿಯ ರೂಪು 'ಮಸಣದ ಬೀಡಾ"ಗುತ್ತದೆ. ಹಾಗೆಯೇ ಧುರೀಣನು ಜನತೆಯ ದೃಷ್ಟಿಯಲ್ಲಿ ಒಮ್ಮೆ ಕೆಳಮುಖವಾದರೆ ಅವನ ಗತಿ ಅಧೋಗತಿ! ಆದುದರಿಂದ ಖರೆಯವರು ತಮ್ಮ ಭವಿಷ್ಯವು. ಹೇಗಿದೆಯೆಂದು ತಿಳಿಯುವುದುತ್ತಮವಲ್ಲವೆ?



ಮುಂಬಯಿಯ ಆರ್ಥಿಕ ಮಂತ್ರಿಗಳಾದ **ಕನ್ನಡಿಗ ಮಾನ್ಯ ಎ. ಬಿ. ಲಠ್ಠೆಯವರು** ನವಂಬರದಿಂದ ಒಕ್ಕಲುತನ, ಸಹಕಾರ ಮತ್ತು ಗ್ರಾಮೋದ್ಧಾರ ಖಾತೆಗಳನ್ನು ತೆಗೆದುಕೊಳ್ಳುವರು.

❁

ಂಂ ದೆಹಲಿ ಸಭೆಯಲ್ಲಿ ರಾಜಾಜಿಯವರು ಖರೆಯವರ ಆರೋಪಣೆಯು "ಫಸ್ಟ್ ಕ್ಲಾಸ್ ಸುಳ್ಳೆ"ಂದು ಹೇಳಿದ್ದಕ್ಕೆ ಉತ್ತರವಾಗಿ ಡಾ| ಖರೆಯವರು "ಸುಳ್ಳು ಹೇಳುವುದರಲ್ಲಿ ರಾಜಾಜಿಯವರೆದುರು ನಾನು ಎಷ್ಟೆಂದರೂ ಅಲ್ಪನೇ" ಎಂದು ವ್ಯಂಗ್ಯವಾಗಿ ಹೇಳಿಬಿಟ್ಟದ್ದಾರೆ. ಬಂಗಾಳದ ಪ್ರಧಾನರಾದ ಫಜ್ಲುಲ್ ಹಕ್ಕರು ಕಂಚಿಯಲ್ಲಿ ನಿಜವಾದ 'ಹುಲಿ-ಸಿಂಹ'ಗಳಂತೆ ಗರ್ಜಿಸಿ, 'ಬಂಗಾಳ ಮಂತ್ರಿಮಂಡಲಕ್ಕೂ ಸಾರ್ವಜನಿಕ ನೌಕರರಿಗೂ ಇರುವ ಸಂಬಂಧವು ಚೆನ್ನಾಗಿಲ್ಲವೆಂಬುದು ಪ್ರಚಂಡ ಸುಳ್ಳು" ಎಂದು ಹೇಳಿದ್ದಾರೆ.

❁

ಂಂ ಸುಳ್ಳು ಹೇಳುವುದರಲ್ಲಿ ಭಾರತೀಯರಿಗೂ ಬ್ರಿಟಿಷರಿಗೂ ಪ್ರಚಂಡ ಸ್ಪರ್ಧೆಯಾಗಿ ಬ್ರಿಟಿಷರೇ ಗೆದ್ದುಬಿಟ್ಟದ್ದಾರೆ. ಲಾರ್ಡ್ ಲಿನ್ಲಿತ್ಗೋರವರು ಆರೋಗ್ಯ

ಲಾಭಕ್ಕಾಗಿ ಮಾತ್ರ ಲಂಡನಿಗೆ ಹೋಗುವುದೆಂದು ಹಸಿ ಹಸಿ ಸುಳ್ಳು ಹೇಳಿ ಫೆಡರೇಶನಿನ ಕುರಿತು ಚರ್ಚಿಸಿದರು. ಭಾರತದ ಉಪಸಚಿವರಾದ ಕರ್ನಲ್ ಮ್ಯೂರ್ ಹೆಡ್ಡರು ಭಾರತವನ್ನು ನೋಡಿ ಸಂತೋಷ ಪಡಲಿಕ್ಕಾಗಿ ಮಾತ್ರ ಬಂದಿರುವುದೆಂಬ ಪರಿಶುದ್ಧ ಸುಳ್ಳನ್ನು ಹೇಳಿ ಗಾಂಧಿಜಿಯವರೊಡನೆ ಕೂಡಾ ಫೆಡರೇಶನಿನ ಕುರಿತು ಚರ್ಚಿಸಲಿದ್ದಾರೆ. ಜೀವವಿದ್ದವರೆಲ್ಲಾ ಸುಳ್ಳು ಹೇಳುತ್ತಾರೆಂದಾಯಿತು!



೦೦ ಮೌಲಾನಾ ಶೌಕತಾಲಿಯವರು ಇತ್ತೀಚೆಗೆ ತಾನು ಮಹಾ "Vagabond" (ಅಂದರೆ ಸಂಚಾರಿ ಅಥವಾ ತಲೆಹೋಕ) ಎಂದು ಹೇಳಿದ್ದಾರೆ. ಇಷ್ಟುಮಾತ್ರವಲ್ಲ. ಅವರು ತನ್ನ ಜೀವನವು ಹೇಗೆ ನಡೆಯುವುದೆಂದು ವಿವರಿಸುತ್ತಾ-ತನಗೆ ಬ್ರಿಟಿಷರು ಪ್ರತಿ ತಿಂಗಳು ೧೫೦ ರೂಪಾಯಿಗಳ ಪೆನ್ಶನನ್ನೂ ಹೈದರಾಬಾದಿನ ನಿಜಾಮರು ೨೦೦ ರೂಪಾಯಿಗಳನ್ನೂ ಕೊಡುತ್ತಿರುವರೆಂದು ಹೇಳಿದ್ದಾರೆ. ಮುಸ್ಲಿಮ್ ಜಗತ್ತಿನ ಅತ್ಯಂತ ಸುಂದರಿಯರಾದ ಹುಡುಗಿಯರನ್ನು ನಿಜಾಮರ ಮಕ್ಕಳಿಗೆ ಮದುವೆ ಮಾಡಿಸುವ ಏರ್ಪಾಡು ಮಾಡಿರುವುದೇ ಈ ಪೆನ್ಶನಿಗೆ ಕಾರಣವಂತೆ. ಸರಿ. ಹೈದರಾಬಾದಿನ ನಿಜಾಮರು ಬಹಳ ಉದಾರಿಗಳೆಂಬುದು ಇದರಿಂದ ಸ್ಪಷ್ಟವಾಗುತ್ತದೆ!



ಮೌಲಾನಾ ಶೌಕತಾಲಿಯವರು.



೦೦ ಈ ರಹಸ್ಯವನ್ನು ತಿಳಿದಿರುವ ಜಿನ್ನರು ಕೂಡಾ ಕಾಂಗ್ರೆಸು ಬ್ರಿಟಿಷರೊಡನೆ ಗುಟ್ಟಿನಲ್ಲಿ ಸ್ನೇಹ ಮಾಡಿಕೊಂಡಿದೆಯೆಂದು ಹೇಳುವುದನ್ನು ನೋಡುವಾಗ ಮಿ| ಜಿನ್ನರ ಹಿತ್ತಾಳಿಯೂ ಹೊರಗಾಗುತ್ತದೆ. ಅವರ ಇತ್ತೀಚೆಗಿನ ಚಟುವಟಿಕೆಗಳನ್ನು ನೋಡುವಾಗ ಮೌ. ಶೌಕತಾಲಿಯವರಂತೆಯೇ ಜಿನ್ನರಿಗೂ ಪೆನ್ಶನ್ ಬರುತ್ತಿದೆಯೇ ಎಂಬ ಸಂಶಯವಾಗುತ್ತಿದೆ. ಕಾರಣ—ಬ್ರಿಟಿಷರು ಹಿಂದೂ ಮುಸಲ್ಮಾನರು ತಲೆಯೊಡೆಸುಕೊಳ್ಳುವಂತೆ ಪ್ರಚಾರಕಾರ್ಯ ನಡೆಸುತ್ತಿರುವಾಗ, ಇದನ್ನು ತಿಳಿಯುವಷ್ಟು ಚುರುಕು ಬುದ್ಧಿಯುಳ್ಳ ಜಿನ್ನರು ಕೂಡಾ ಜಗಳವಾಡುತ್ತಿರುವುದು ಆಶ್ಚರ್ಯದ ಸಂಗತಿ.

೦೦ "ರಾಜಕೀಯ ಕೈದಿಗಳು ಬರುವ ಆರು ತಿಂಗಳುಗಳಲ್ಲೇ ಬಂಧವಿಮೋಚಿತರಾಗುವರೆಂದು ನಾನಿನ್ನೂ ಆಶಿಸುತ್ತೇನೆ. ಬಂಗಾಳದ ಎಸೆಂಬ್ಲಿಯು ಇನ್ನೊಮ್ಮೆ ಸೇರುವಾಗ ರಾಜಕೀಯ ಕೈದಿಗಳ ಮನಸ್ಸು ಮತ್ತು ಹೃದಯಗಳ ಮೇಲೆ ಸುಳಿಯುತ್ತಿರುವ ಕಾರ್ಮೋಡಗಳು ಮಾಯವಾಗುವುವೆಂದು ನನ್ನಲ್ಲಿ ಯಾವುದೋ ಒಂದು ಶಕ್ತಿಯು ಹೇಳುತ್ತಿದೆ"ಯೆಂದು ಶ್ರೀ. ಶರತ್ ಚಂದ್ರಬೋಸರು ಹೇಳುತ್ತಾರೆ. ದೇಶಪ್ರೇಮವು ಭಾರತದಲ್ಲಿ ದೊಡ್ಡದೊಂದು ಧರ್ಮವಾಗಿ ಮಾರ್ಪಾಟಾಗುತ್ತಿದೆ. ರಾಜಕೀಯ ಪ್ರಶ್ನೆಗೆ ಈ ನಿಗೂಢ ಉತ್ತರವೆ? ಶರತ್ ಬೋಸರು ಹಿಂದಿನ ಋಷಿಗಳು ಪರಬ್ರಹ್ಮನನ್ನು ಕಾಣುತ್ತಿದ್ದಂತೆಯೇ ಭಾರತವನ್ನೂ ಕಾಣುತ್ತಿದ್ದಾರೆ!





ನೋಡಿದೊಡನೆಯೇ ಆಲದ ಮರದ ಬೀಳೆಂದು ಅಲಕ್ಷಿಸಬೇಡಿ., ನಮ್ಮ ನಾಡಿನ ಕೋಳಿಗಳಿಗೆ ಆಶ್ಚರ್ಯ ಹುಟ್ಟಿಸುವ ಈ ಕೋಳಿಯು ಯೋಕೋಹಾಮಾ ಎಂಬಲ್ಲಿದೆ. ಇದರ ಬಾಲವು ಇಪ್ಪತ್ತಡಿ ಉದ್ದವಿದೆ. ಮಹಾರಾಜ-ರಾಜ್ಞಿಯರು ಠೀವಿಗಾಗಿ ತಮ್ಮ ಬೆನ್ನಹಿಂದೆ ಉದ್ದವಾದ ಬಟ್ಟೆಯನ್ನು ಧರಿಸುವಂತೆ ಈ "ಕುಕ್ಕುಟ ರಾಜ" ನುಕೂಡಾ ನಿಸರ್ಗದ ಸಹಾಯದಿಂದ ಉದ್ದವಾದ ಬಾಲವನ್ನಾಂತು ತನ್ನ ಠೀವಿಯನ್ನು ಹೆಚ್ಚಿಸಿಕೊಂಡಿದ್ದಾನೆ, ರಾಜ-ರಾಜ್ಞಿಯರು ನಡೆಯುವಾಗ ಹಿಂದಿನ ಸೆರಗನ್ನು ಹಿಡಿಯುವುದಿದ್ದರೂ ಈ ಕುಕ್ಕುಟ ರಾಜನು ಅದಕ್ಕೆ ಯಾವ ವ್ಯವಸ್ಥೆಯನ್ನು ಮಾಡಿರಬಹುದೆಂಬುದು ಮಾತ್ರ ತಿಳಿದಿಲ್ಲ.

# ಜಗತ್ತಿನ ವಿಚಿತ್ರ ವಾರ್ತೆಗಳು

### ಸಸ್ಯಗಳಿಗೆ ನಿದ್ರೆ ಬೇಕಂತೆ!

ಮನುಷ್ಯರಂತೆಯೇ ಸಸ್ಯಗಳಿಗೆ ಕೂಡಾ ಧಾರಾಳ ನಿದ್ರೆಯು ಬೇಕಾಗಿದೆಯೆಂಬುದನ್ನು ಜೋಹನ್‌ಸನ್ ಎಂಬವನು ಕಾರ್ಯತಃ ಸ್ಪಷ್ಟಪಡಿಸಿದ್ದಾನೆ.

ಸ್ಕೇಂಡಿನೇವಿಯದ ಈ ಮಹಾನುಭಾವನು ಸಸ್ಯಗಳ ವಿಶ್ರಾಂತಿಯ ರಹಸ್ಯವನ್ನರಿತು ಕೆಲವು ಹೂ ಗಿಡಗಳ ಬೇರುಗಳನ್ನು ಬಿಸಿನೀರಿನ ಕೊಳವೆಯ ಬದಿಯಲ್ಲಿಟ್ಟನಂತೆ. ಮರುದಿನ ಹೂಗಳು ಬಹಳ ಸುಂದರವಾಗಿದ್ದುವಂತೆ. ನಿದ್ರೆಮಾಡಲು ಬೆಚ್ಚಗಿರುವ ನೆಲವೇ ಸಸ್ಯಗಳಿಗೆ ಅವಶ್ಯವೆಂದು ಜೋಹನ್‌ಸನನಿಗೆ ಆಗ ಸ್ಪಷ್ಟವಾಯಿತು.

ಅವನ ಮಹತ್ವದ ಶೋಧವೆಂದರೆ ಬೇರುಗಳಿಗೆ ನಿದ್ರೆಬರಿಸುವ ಕ್ಲೋರೊಫಾರ್ಮನ್ನು ಕೊಡುವುದಾಗಿದೆ. ಒಂದು ಹೂ ಗಿಡದ ಗಡ್ಡೆಯನ್ನು ಕ್ಲೋರೊಫಾರ್ಮಿನಲ್ಲಿಟ್ಟು ನೋಡಿದಾಗ ಅವುಗಳು ಬೇಗನೆ ಹೆಚ್ಚು ಎಂದಿಗಿಂತ ಹೂಬಿಟ್ಟವು.

*

### ಮಗುವನ್ನುಳಿಸಲು ಸಿಂಹದ ಕೆನ್ನೆಗೆ ಹೊಡೆದ ಜನನಿ!

ಆಫ್ರಿಕದ ನೀಗ್ರೋ ಜನನಿಯೊಬ್ಬಳು ನರಭಕ್ಷಕ ಸಿಂಹವೊಂದರ ಕೆನ್ನೆಗೆ ಹೊಡೆದ ಕತೆಯನ್ನು ಹೇಳಲು ಬದುಕಿರುವುದು ಆಶ್ಚರ್ಯದ ಸಂಗತಿಯಾಗಿದೆ.

ಇಪ್ಪತ್ತೆರಡು ಜನರನ್ನು ತಿಂದಿದ್ದ ಆ ಸಿಂಹವು ಆಕೆಯ ಮಗುವನ್ನು ಎಳೆದುಕೊಂಡು ಹೋಗುತ್ತಿದ್ದ ಶಬ್ದ ಕೇಳಿ, ಅವಳು ಮನೆಯ ಹೊರಗೆ ಬಂದಳು. ಬಂದವಳೇ ತನ್ನ ಬರಿಗೈಯಿಂದ ಸಿಂಹದ ಮುಖ

ಸಿಂಹಕ್ಕೆ ಹೆದರಿಕೆಗಿಂತ ಹೆಚ್ಚು ಆಶ್ಚರ್ಯವಾಗಿ ಅದು ಮಗು

### ಜಗತ್ತಿನ ವಿಚಿತ್ರ ದಂಪತಿಗಳು!



೩ ಅಡಿ ೧೦ ಇಂಚುಗಳ ವರನಿಗೆ—೩ ಅಡಿ ೮ ಇಂಚುಗಳ ವಧು.
ಬ್ಲೇಕ್‌ಪೂಲ್ ಎಂಬಲ್ಲಿ ಈ 'ಅತ್ಯುದ್ದ' ದಂಪತಿಗಳಿಗೆ ಮೊನ್ನೆ ವಿವಾಹವಾಯಿತು.
ಬಲಗಡೆಯಲ್ಲಿರುವ ಹರ್ಮಾನ್ ರೆಟ್ಟರನಿಗೆ ೪೮ ವರುಷ ಪ್ರಾಯ.
೩೨ ವರುಷ ಪ್ರಾಯದ ಅವನ ಮಡದಿ
ಎಡಗಡೆಯಲ್ಲಿದ್ದಾಳೆ.

ಕ್ಕೆ ಸಿಕ್ಕಾಬಟ್ಟೆ ಹೊಡೆಯಲಾರಂಭಿಸಿದಳು.

ವನ್ನು ಬಿಟ್ಟು ನಾಯಿಯಂತೆ ಕಾಡಿಗೋಡಿತು. ಕೂಡಲೆ ಆ ನೀಗ್ರೋ

ಹೆಂಗಸು ಮಗುವನ್ನು ಮನೆಗೆ ತಂದು ಈ ವಿಚಿತ್ರ ಕತೆಯನ್ನು ಇತರರಿಗೆ ಹೇಳಿದಳು.

*

**ಕಾನೂನನ್ನು ಮುರಿದು ಜಾರಿಮಾಡಿದ ಅಧಿಕಾರಿ!**

ವೇಂಕೂವರಿನಲ್ಲಿ ಪೋಲೀಸ್ ಅಧಿಕಾರಿಯೊಬ್ಬನು ಕಾನೂನನ್ನು ಪ್ರತ್ಯಕ್ಷವಾಗಿ ಮುರಿದು ಜಾರಿಗೆ ತಂದ ವಿಚಿತ್ರ ಕತೆಯೊಂದು ಪ್ರಕಟವಾಗಿದೆ.

ಮೋಟಾರುಗಳನ್ನು ವೇಗವಾಗಿ ನಡೆಸುವುದರಿಂದ ಹೆಚ್ಚು ಸಮಯವುಳಿದಂತಾಗುವುದಿಲ್ಲವೆಂಬುದನ್ನು ಸ್ಪಷ್ಟಗೊಳಿಸಲಿಕ್ಕಾಗಿ ಅವನು ನಗರದ ಜನಭರಿತ ಬೀದಿಗಳಲ್ಲಿ ಅತ್ತಿತ್ತ ಹೋಗುತ್ತಿದ್ದ ವಾಹನಗಳನ್ನು ನಿಲ್ಲಿಸಿ, ತನ್ನ ಮೋಟಾರ್ ಕಾರಿನಲ್ಲಿ ಪ್ರಚಂಡ ವೇಗದಿಂದ ಸಂಚರಿಸಿ (ತನ್ನ ಪ್ರಾಣವುಳಿಸಿಕೊಂಡು!) ಮೂರು ನಿಮಿಷ, ೪೫ ಸೆಕುಂದಗಳು ಮಾತ್ರ ಲಾಭವಾಗಿವೆಯೆಂದು ಹೇಳಿದನಂತೆ!

*

**೯೦ ವರುಷದ ಜನನಿಗೆ ಅವಳಿ ಜವಳಿ ಮಕ್ಕಳು.**

ಬ್ರೇಝಿಲಿನ ಸೆಟಿಲಾಗೊಸ್ ಎಂಬಲ್ಲಿಯ ೯೦ ವರುಷದ ಮುದುಕಿಯೊಬ್ಬಳು ಅವಳಿಜವಳಿ ಮಕ್ಕಳನ್ನು ಹೆತ್ತಿದ್ದಾಳೆ.

ಅವಳ ಜೀವನದಲ್ಲಿ ೭೦ ವರುಷಗಳ ತನಕ ಮಕ್ಕಳೇ ಹುಟ್ಟಲಿಲ್ಲ. ಆಕೆಯ ಗಂಡನೂ ೯೦ ವರುಷದ ಮುದುಕ. ಕೊನೆಗೆ ಮುದುಕರಿಬ್ಬರು ಹೇಗಾದರೂ 'ಅಪುತ್ರಸ್ಯ ಗತಿರ್ನಾಸ್ತಿ' ಎಂಬ ಭಯದಿಂದ ಹೊರಟಾದರು.

**ವಿವಾಹಿತ ವಿದ್ಯಾರ್ಥಿನಿಯರನ್ನು ಹೊರಗೆ ಹಾಕಿದರು!**

ಅಮೇರಿಕದ ನ್ಯೂಯಾರ್ಕ್ ನಗರದಲ್ಲಿ ಇತ್ತೀಚೆಗೆ ೧೧೨ ಮಂದಿ ವಿವಾಹಿತ ವಿದ್ಯಾರ್ಥಿನಿಯರನ್ನು ಶಾಲೆಗಳಿಂದ ಹೊರಗೆ ಹಾಕಿದ್ದಾರೆ. ಶಾಲೆಗಳ ಸುಪರಿಂಟೆಂಡೆಂಟರಾದ ಮಿ. ಹೆರಾಲ್ಡ್ ಜಿ. ಕೇಂಪ್ ಬೆಲ್ ರವರಂದಿರುವಂತೆ ೧೧೨ ಮಂದಿ ವಿದ್ಯಾರ್ಥಿನಿಯರಲ್ಲಿ ಒಬ್ಬಳು ೧೨ ವರುಷದ ಸತಿ, ನಾಲ್ಕು ಮಂದಿ ೧೩ ವರುಷದವರು, ಇಪ್ಪತ್ತೇಳು ಮಂದಿ ೧೪ ವರುಷದವರು, ಎಂಭತ್ತು ಮಂದಿ ೧೫ ವರುಷದವರು.

ಇವರಲ್ಲದೆ ೧೬ ವರುಷ ಪ್ರಾಯದಲ್ಲೇ ಮದುವೆಯಾದ ೩೩೪ ಹುಡುಗರನ್ನು ಕೂಡಾ ಶಾಲೆಗಳಿಂದ ಹೊರಗೆ ಹಾಕಿದ್ದಾರೆ. ಅಮೇರಿಕದಲ್ಲಿ ಬಾಲ್ಯ ವಿವಾಹವು ಎಷ್ಟು ಪ್ರಾಬಲ್ಯಕ್ಕೆ ಬಂದಿದೆಯೆಂದು ಇದರಿಂದ ವ್ಯಕ್ತವಾಗುತ್ತದೆ.

*

**ಮೀನಿನಿಂದ ಉಣ್ಣೆ ಬಟ್ಟೆ!**

ಜರ್ಮನಿಯಲ್ಲಿ ಹಸಿ ಪದಾರ್ಥಗಳು ಕಡಿಮೆಯಾಗಿರುವುದರಿಂದ ಅಲ್ಲಿಯ ವೈಜ್ಞಾನಿಕರು ಜರ್ಮನಿಯಲ್ಲಿಯೇ ಸಿಗುವ ಸಾಧನಗಳಿಂದ ರಾಷ್ಟ್ರಕ್ಕೆ ಬೇಕಾದವುಗಳನ್ನು ತಯಾರಿಸಲು ಯತ್ನಿಸುತ್ತಿದ್ದಾರೆ. ಇತ್ತೀಚೆಗೆ ಮೀನಿನಿಂದ ಉಣ್ಣೆ ಬಟ್ಟೆಯನ್ನು ತಯಾರಿಸಿರುವುದು ಆಧುನಿಕ ಜಗತ್ತಿನ ಆಶ್ಚರ್ಯಗಳಲ್ಲೊಂದಾಗಿದೆ.

ಈ ಬಟ್ಟೆಯು ಉಣ್ಣೆಯಷ್ಟೇ ಬಾಳಿಕೆಯಿರುವುದಲ್ಲದೆ ಒಗೆದರೆ ಕೂಡಾ ಕೆಡುವುದಿಲ್ಲ. ಅರ್ಧಾಂಶ ಮೀನಿನ ಆಲ್ಬ್ಯುಮಿನ್ ಮತ್ತು ಅರ್ಧಾಂಶ ಸೆಲ್ಯುಲೋಸ್ ಎಂಬುದನ್ನು ಸೇರಿಸಿ ಈ ಬಟ್ಟೆಯನ್ನು ತಯಾರಿಸುತ್ತಾರೆ.

---

**ಆ ರೀತಿ ನಾನು ಎಂದಿಗೂ ಮಾಡಿರುವುದಿಲ್ಲ!**

ಆಫೀಸರು (ತನ್ನ ಮೋಟಾರು ಡ್ರೈವರನೊಂದಿಗೆ):— 'ಹುಷಾರ್! ಹುಷಾರು! ಹಿಂದಿನಿಂದ ಒಂದು ಮೋಟಾರು ಬರುತ್ತಿದೆ.'

ಮೋಟಾರು ಡ್ರೈವರು:— ಭಯವಿಲ್ಲ ಸಾರ್! ನಾನು ಇದುವರೆಗೆ ಎಂದೂ ಹಿಂದಿನಿಂದ ಬರುತ್ತಿರುವವದ ಮೇಲೆ ಮೋಟಾರು ಹತ್ತಿಸಲಿಲ್ಲ ಸಾರ್!

ಕೊಪ್ಪದ ಶ್ರೀ ರಾಮಸ್ವಾಮಿ ಐಯಂಗಾರ್

# ದೇವನ ಮೇಲೆ ಮಾನವನ ದಯಾದೃಷ್ಟಿ

## ನಾಯಿ ನರಿಗಳು ಬೆದರದ ದೇವನಿಗೆ ಮಾನವನು ಹೆದರಿ ನಡುಗುತ್ತಿದ್ದಾನೆ.

### ಕಲ್ಪನಾ ದೇವರುಗಳನ್ನು ಹೊಡೆದೋಡಿಸಿ ಮಾನವ ಶಕ್ತಿಯನ್ನು ಮೆರಸಬೇಕು.

---

['ಮನೋಹರ'ದ ಲೇಖನವನ್ನೊಂದು ಬರೆದುದು.]

**'ನಾಸ್ತಿಕ'**

●

**ದೇವರ ಮೇಲೆ ಮನುಷ್ಯರ ದಯಾದೃಷ್ಟಿ**

ಮನುಷ್ಯರು ಮಕ್ಕಳನ್ನು ಹುಟ್ಟಿಸುವುದು ಸ್ವಾಭಾವಿಕವೆನ್ನಿ. ಆದರೆ ಮಾನವ ಜಾತಿಯು ದೇವರುಗಳನ್ನು ಏಕ ಪ್ರಕಾರವಾಗಿ ಹುಟ್ಟಿಸುತ್ತಿರುವುದು ಬಹಳ ಸೋಜಿಗದ ಸಂಗತಿಯಾಗಿದೆ. ಜಗತ್ತಿನಲ್ಲಿರುವ ದೇವರುಗಳನ್ನು ಲೆಕ್ಕ ಮಾಡಿದರೆ ಆ ಸಂಖ್ಯೆಯೇನು ಚಿಕ್ಕದಿರಬಹುದೆಂದು ಭಾವಿಸಬೇಡಿರಿ.

*

**ಮಾನವನೇ ದೇವನ ತಂದೆ!**

ದೇವನನ್ನು ಸೃಷ್ಟಿಸುವುದು ಬಹಳ ಸುಲಭದ ಕೆಲಸವೆಂಬುದು ಹಲವರ ಅನುಭವದ ವಿಷಯವಾಗಿದೆ. ಒಂದು ನಿರ್ಜೀವ ವಸ್ತುವನ್ನು ತಂದು ಹಲವಾರು ಮಂದಿ ಒಟ್ಟುಸೇರಿ ಭಕ್ತಿ ಭಾವದಿಂದ ಪೂಜಿಸತೊಡಗಿದರೆ ಅದಕ್ಕೊಂದು ಮಹಾತ್ಮೆಯು ಬಂದೇ ಬರುತ್ತದೆ. ಈ ಉಪಾಯವನ್ನು ಜಗತ್ತಿನ ಪ್ರಾರಂಭದಲ್ಲಿ ಕೆಲವರು ತಿಳಿದು ತಮ್ಮಿಂದಲೇ ಸೃಷ್ಟಿಸಲ್ಪಟ್ಟ ದೇವನ ಪೌರೋಹಿತ್ಯವನ್ನು ವಹಿಸಿದರು.

**ಸರ್ವಶಕ್ತ 'ಪರಮಾತ್ಮ'**

ಈ ಪುರೋಹಿತ ಸಂಗಡದವರು ಇದನ್ನು ತಮ್ಮದೊಂದು ಕಸುಬಾಗಿ ಮಾಡಿಕೊಂಡರು. ಮನುಷ್ಯನು ಆನಂದ, ಸುಖ, ಶಾಂತಿಗಳನ್ನು ಅತಿಯಾಗಿ ಬಯಸುವ ಪ್ರಾಣಿಯೆಂದು ಅರಿತಿದ್ದ ಈ ಚತುರ ಜನರು ಪರಮಾತ್ಮನಿಗಾಗಿ ಕಾಣದೊಂದು ಸ್ವರ್ಗವನ್ನು ಕಲ್ಪಿಸಿದರು. ಕಷ್ಟವಿಲ್ಲದೆ ತಿಂದುಂಡು ಸುಖಿಸುವ ಜನರ ನಾಡಾಗಿ ಅದನ್ನು ವರ್ಣಿಸಿದರು. ಜಗತ್ತಿನಲ್ಲೇ ಇರದಂತಹ ಸುಂದರಿಯರು ಅಲ್ಲಿರುವರೆಂದು ಹೇಳಿದರು. ಹುಟ್ಟು ಸಾವುಗಳಿಲ್ಲದ ಗುಣಗಳನ್ನು ದೇವರ ಗಳಿಗೆ ಕೊಟ್ಟರವರು.

**ಮಹಾ 'ಬ್ರಹ್ಮ'ನಾದ ಮಾನವ!**

ಈ ವಿಶ್ವವನ್ನು ದೇವನು ಸೃಷ್ಟಿಸಿದನೆಂದು ಜಗತ್ತಿನ ವಿವಿಧ ಧರ್ಮಗಳು ಹೇಳುತ್ತಿವೆ. ಈ ಧರ್ಮಗಳ ಆದೇಶವಾದಿಗಳು ವ ಸ್ಥಾಪಕರು ಮನುಷ್ಯರಾಗಿದ್ದರೆಂದು ಹೇಳಬೇಕಾಗಿಲ್ಲ. ಸಾಮಾನ್ಯ ಜನರಿಂದ ಒಂದಿಷ್ಟು ಅಧಿಕಜ್ಞಾನವುಳ್ಳವರು ಅತಿಮನುಷ್ಯರೆಂದು ಪರಿಗಣಿಸಲ್ಪಡುವುದಲ್ಲದೆ ಕ್ರಮೇಣ ಅವರಿಗೆ ಸಿಗಬಹುದಾದ ಅನುಯಾಯಿಗಳು ಅವರನ್ನು ದೇವರ ಅಪರಾವತಾರವೆಂದು ಹೇಳುವುದು ಒಂದು ರೂಢಿಯಾಗಿದೆ. ಅಚೇತನ ವಸ್ತುಗಳು ಮನುಷ್ಯನ ಕೃಪೆಯಿಂದ ದೇವತೆಗಳಾಗಿ ಮಾರ್ಪಾಟು ಹೊಂದಿವೆ. ಆನೆ ಮುಖದ ದೇವರು, ದನ, ನಾಯಿ, ಇಲಿ, ಕುದುರೆ, ಮಂಗ, ಮಣ್ಣು, ಕಲ್ಲು, ಮರ ಮೊದಲಾದುವುಗಳು ದೈವತ್ವವನ್ನು ಹೊಂದಿರುವುದು ಮನುಷ್ಯನಿಂದಾಗಿ.

**ವಿಧ ವಿಧದ ದೇವರು**

ಒಂದು ಧರ್ಮದವರು ತಮ್ಮ ದೇವರುಗಳನ್ನು ಮೂರ್ತಿಗಳೊಳಗೆ ಭಕ್ತಿಯ ಬಲದಿಂದ ಆವಾಹನೆ ಮಾಡಿದರೆ, ಇನ್ನೊಂದು ಧರ್ಮದವರು ಅವನಿಗೆ ರೂಪವೇ ಇಲ್ಲವೆಂದು ಹೇಳಿ, ಮನಸ್ಸಿನಲ್ಲಿಯೇ

ಪೂಜಿಸುತ್ತಾರೆ. ಇನ್ನು ಕೆಲವರು ದೇವರಿಗೆ ರೂಪವಿಲ್ಲವೆಂದು ಹೇಳಿ ಅವರ ಧರ್ಮವನ್ನು ಸ್ಥಾಪಿಸಿದವನು ಹೇಳಿರಬಹುದಾದ ವಿಷಯಗಳನ್ನೊಳಗೊಂಡ ಪುಸ್ತಕವನ್ನು ಪೂಜಿಸುತ್ತಾರೆ. ಪ್ರತಿಯೊಂದು ಪಂಗಡದವರೂ ತಾವು ಸೃಷ್ಟಿಸಿದ ದೇವರ ಮಹತ್ವವನ್ನು ಹೆಚ್ಚಿಸಲು ಯತ್ನಿಸುತ್ತಾರೆ. ಈ ಮಹತ್ವಿಕೆಯ ಹೆಚ್ಚಳದ ಯತ್ನದಲ್ಲಿ ಮನುಷ್ಯನು ತನ್ನ ಸ್ವಾರ್ಥವನ್ನು ಕೂಡಾ ಲೆಕ್ಕಿಸದೆ ದೇವರುಗಳಿಗಾಗಿ ಭವ್ಯದೇವಾಲಯಗಳನ್ನು ಕಟ್ಟಿಸುತ್ತಾನೆ. ತನಗೆ ಪ್ರಿಯವಾಗಿರುವ ಪತ್ನಿಯ ಕೊರಳ ಹಾರವನ್ನಾದರೂ ಮಾರಿ, ದೇವರನ್ನು ಶೃಂಗರಿಸುತ್ತಾನೆ.

*

## ದೇವರ ಪ್ರತ್ಯುಪಕಾರ

ಮನುಷ್ಯನು ಬಹಳ ಪ್ರಯಾಸಪಟ್ಟು ದೇವರನ್ನು ಸೃಷ್ಟಿಸಿ, ಅವನ ಕೀರ್ತಿಗಾಗಿ ತನ್ನ ಸರ್ವಸ್ವವನ್ನು ಅರ್ಪಿಸಿದರೂ ದೇವರು ಮಾತ್ರ ಮನುಷ್ಯ ವರ್ಗದ ಮೇಲೆ ಅಧಿಕಾರ ನಡೆಸತೊಡಗಿದ್ದಾನೆ. ಈ ದೇವರಿಂದಾಗಿ ಮನುಷ್ಯನು ತನ್ನ ಬುದ್ಧಿಶಕ್ತಿಯನ್ನು ಅವನಲ್ಲಿ ಒತ್ತೆ ಇಟ್ಟಿದ್ದಾನೆ. ಇದರ ಪರಿಣಾಮವಾಗಿ ಮನುಷ್ಯನು ತಾನು ನಿರ್ಮಿಸಿರುವಂತಹ ದೇವನ ಇಚ್ಛೆಗನುಸಾರವಾಗಿ ಕುಣಿಯಬೇಕೆಂದು ಭಾವಿಸುತ್ತಿದ್ದಾನೆ.

*

## ಮನುಷ್ಯನ ಪರಾಧೀನತೆ

ವೈಜ್ಞಾನಿಕನು ತನ್ನ ಸೃಷ್ಟಿಯನ್ನು ಹತೋಟಿಗೆ ತರಲಾರದೆ ಕಷ್ಟಪಡುವಂತೆ ಮನುಷ್ಯನು ಕೂಡಾ ದೇವರ ಮಾಟಕ್ಕೆ ಸಿಲುಕಿ ತೊಳಲುತ್ತಿದ್ದಾನೆ. ಆಹಾರದಿಂದ ಮೊದಲ್ಗೊಂಡು ಇನ್ನಿತರ ವಸ್ತುಗಳ ಸಾಧನೆಗಾಗಿ ದೇವನೊಡನೆ ಬೇಡುವ ಅವಸ್ಥೆಯು ಮನುಷ್ಯನಿಗುಂಟಾಗಿದೆ. ತನ್ನ ಸೃಷ್ಟಿಯಾದ ದೇವನ ಹೆಸರನ್ನು ಉಚ್ಚರಿಸಿದಷ್ಟೂ ಉತ್ತಮವೆಂಬ ಮೂಢಾಭಿಪ್ರಾಯವು ಮಾನವ ಜಾತಿಯಲ್ಲಿ ತಲೆದೋರಿದೆ. ಈ ಕ್ಷುದ್ರ ಚಳವಳವು ದಿನೇ ದಿನೇ ಬಲವಾಗುತ್ತಿದೆ. ದೊಡ್ಡ ದೊಡ್ಡ ಧಾರ್ಮಿಕ ಸಂಸ್ಥೆಗಳು ದೇವರಿಗೆ ಪರಾಧೀನರಾಗಿರಬೇಕೆಂದು ಭೋಧಿಸುತ್ತಿವೆ. ತಮ್ಮನ್ನು ನಂಬಲಾಗದ ದೇವರಿಗೆ ಪೂರ್ಣವಾಗಿ ಮಾರಿಕೊಂಡು ಹುಚ್ಚರಂತೆ ಕುಣಿಯುತ್ತಿರುವವರು ಭಕ್ತರಾಗಿದ್ದಾರೆ. ಈ ಹುಚ್ಚನ್ನು ಕಂಡು ಅನೇಕರು ಸ್ವಾಮಿಗಳಾಗಿ ಬಡಜನರ ಮೇಲೆ ಅಧಿಕಾರ ನಡೆಸುತ್ತಿದ್ದಾರೆ. ಮೌಲ್ವಿ, ಪೀರರಾಗಿ, ಪ್ರವಾದಿಗಳಾಗಿ ತಮ್ಮ ಕುಯುಕ್ತಿಯಿಂದ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾರೆ. ಇಂತಹರನ್ನು ಹೊಗಳಿ ಉದರಂಭರಣ ಮಾಡುತ್ತಿರುವ ಒಂದು ಜಾತಿಯೇ ತಲೆದೋರಿದೆ.

*

## ಪುರಾಣಗಳ ಕಂತೆ

ದೇವನ ಮಹತ್ವವನ್ನು ಹಾಡಿ ಹೊಗಳುವ ಕತೆಗಳಿಗೆ ಲೆಕ್ಕವಿಲ್ಲ. ವಿವಿಧ ಧರ್ಮಗಳ ಕತೆ, ಪುರಾಣ ಇವೇ ಮೊದಲಾದುವುಗಳು ಮನುಷ್ಯರಲ್ಲಿ ದಾಸ್ಯಮನೋವೃತ್ತಿಯನ್ನು ಹೆಚ್ಚಿಸಿವೆ. ರಾಜಕೀಯ ಧುರೀಣರು ಕೂಡಾ ಧರ್ಮದ ಬಲೆಯನ್ನು ಹರಡಿ ಜನತೆಯ ಕಣ್ಣಿಗೆ ಮಣ್ಣೆರಚಿ ಧುರೀಣತ್ವದ ಛತ್ರಚಾಮರಗಳನ್ನು ಧರಿಸುತ್ತಾರೆ. ಧರ್ಮದಿಂದ ಜಾತಿಗಳು ತಲೆದೋರಿದುವು. ಈ ಜಾತೀಯ ಭಾವವು ಮಾನವ ವರ್ಗವನ್ನು ನಾಶಗೊಳಿಸುತ್ತಿದೆ. ಪರಸ್ಪರ ಕಲಹಗಳು ತಲೆದೋರಲು ಮೂಲ ಕಾರಣವೆಂದರೆ ಜಾತೀಯತೆ. ಈ ಪುರಾಣಗಳ ಕಂತೆಗಳನ್ನು ನಂಬಿ ತಮ್ಮ ಪುರುಷತ್ವವನ್ನು ಕಳೆದುಕೊಂಡಿರುವವರು ಎಂದೂ ಉಚ್ಛ್ರಾಯ ಸ್ಥಿತಿಗೆ ಬರಲಾರರು. ಯಾರು ತಮ್ಮ ಬುದ್ಧಿಶಕ್ತಿಯನ್ನು ದೇವನಲ್ಲಿ ಒತ್ತೆ ಇಡದೆ ಅವನ್ನು ಪೂರ್ಣವಾಗಿ ಉಪಯೋಗಿಸಿದ್ದಾರೋ ಅವರೆಲ್ಲರೂ ಜಗತ್ತಿನ ಮಹತ್ಪುರುಷರಾಗಿದ್ದಾರೆ. ಇತರರು ಅವರನ್ನು ಅತಿಮಾನುಷರೆಂದು ಕರೆಯತೊಡಗಿ ತಮ್ಮ ಅಜ್ಞಾನವನ್ನು ವ್ಯಕ್ತಪಡಿಸಿದ್ದಾರೆ.

## ದೇವರ ಭಯವೇ ದಾಸ್ಯದ ಆರಂಭ!

'ದೇವರ ಭಯವೇ ಜ್ಞಾನದ ಆರಂಭ'ವೆಂದು ಯಾರೋ ಒಬ್ಬ ತಲೆಹೋಕನು ಹೇಳಿರಬೇಕು. ದೇವರ ಭಯದಿಂದ ಜ್ಞಾನಾರಂಭವಾಗುವ ಬದಲು ದಾಸ್ಯಮನೋವೃತ್ತಿಯು ಆರಂಭವಾಗುತ್ತದೆ. ದೇವರ ಭಯವಿಲ್ಲದೆ ಯೋಗ್ಯ ಮನುಷ್ಯರಾಗಿ ಜೀವಿಸಲು ಶಕ್ಯವಿದೆ.

'ನಾಸ್ತಿಕ'ರು ಸಮಾಜಕ್ಕೆ ಹಾನಿಕಾರಕರೆಂದು ಭಾವಿಸುವುದು ಶುದ್ಧ ತಪ್ಪು. ದೇವನನ್ನು ಪ್ರಶಂಸಿಸುವುದಕ್ಕಾಗಿ ಅನಾವಶ್ಯಕ ವ್ಯಯಿಸುತ್ತಿರುವ ಕಾಲವನ್ನು ಇತರ ಉಪಯುಕ್ತ ಕೆಲಸಗಳಿಗಾಗಿ ಉಪಯೋಗಿಸಬಹುದಾಗಿದೆ. ಅವನಿಗಾಗಿ ಮಾಡುವ ಹೋಮ ಹವನಗಳಿಗೆ ದುರುಪಯೋಗಿಸುವ ಘೃತಾದಿಗಳನ್ನು ಚೇತನ ಸ್ವರೂಪರಾದ ನರದೇವರುಗಳಿಗೆ ಕೊಡುವುದು ಹಿತಕರವಾಗಿದೆ. ವಿವಿಧ ದೇವರ ಕೀರ್ತಿ ಪ್ರತಿಷ್ಠೆಗಳನ್ನುಳಿಸುವುದಕ್ಕಾಗಿ ಚೆಲ್ಲುವ ರಕ್ತವನ್ನು ಸರ್ವರ ಹಿತಕ್ಕಾಗಿ ಉಪಯೋಗಿಸಬಹುದಾಗಿದೆ. ಪ್ರಾಣಿಗಳು, ಮೂಕ ಪ್ರಾಣಿಗಳು ಕೂಡಾ ಬೆದರದಂತಹ ನಿರ್ಜೀವ, ನಿಶ್ಶಕ್ತ, ದೇವರುಗಳಿಗೆ ಮನುಷ್ಯನು ಬೆದರುತ್ತಿರುವುದು ಲಜ್ಜಾವಹವಾಗಿದೆ. ಪುರಾತನ ಕಾಲದ ಕಂತೆಗಳನ್ನು ನಾವಿಂದು ಮನ್ನಿಸಬೇಕೆನ್ನುವ ಮಾತಿಗೆ ಅರ್ಥವಿಲ್ಲ. ಅನಾಗರಿಕರ ಆಜ್ಞೆಗಳಿಗೆ ತಲೆ ಬಾಗಿಸುವ ಅವಶ್ಯಕತೆಯಾದರೂ ಎಲ್ಲಿದೆ? ಮುದುಕರ ಮುದಿ ವಿಶ್ವಾಸವನ್ನು ಈಗಿನ ಯುವಕರೂ ನಂಬಬೇಕೇಕೆ?

*

**ದೇವರುಗಳನ್ನು ಕಲ್ಪನಾ ಸಾಮ್ರಾಜ್ಯಕ್ಕೆ ಓಡಿಸೋಣ!**

ಬದುಕದಿರುವ ದೇವನಿಗಾಗಿ ಹೋರಾಡಿ, ನಮ್ಮ ಬುದ್ಧಿ ಶಕ್ತಿಯನ್ನು ಅವಮಾನಿಸುವ ಕಾಲವೆಂದೋ ಕಳೆದು ಹೋಗಿದೆ. ಕಲ್ಪನಾ ಸೃಷ್ಟಿಗಳಾದ ಈ ದೇವರುಗಳನ್ನು ಕಲ್ಪನಾ ಸಾಮ್ರಾಜ್ಯಕ್ಕೆ ಓಡಿಸುವುದು ಇಂದಿನವರ ಮಹದವಶ್ಯ ಕೆಲಸವಾಗಿದೆ. ಹಿಂದಿನ ಕಾಲದ ವೈಭವವನ್ನು ನೆನೆದು, ಭಗವಂತನ ಲೀಲಾ ಜಾಲವೆಂದು ಭಾವಿಸಿ,ಮುಂದಿನ ಜನ್ಮದಲ್ಲಿ ನಮಗೆ ಸುಖಸಿಗುವುದೆನ್ನುವ ಮೂಢ ಭಾವನೆಯನ್ನು ಹೊಡೆದೋಡಿಸಿ ಮಾನವನ ಮಹತ್ವವನ್ನು ಪ್ರದರ್ಶಿಸುವ ಕಾಲವಿದೆಂದು ಎಲ್ಲರೂ ತಿಳಿಯಬೇಕಾಗಿದೆ.

---

# ೫೨೦ ಜನರಿರುವ ಬಾಡು ದ್ವೀಪ

## ಅಥವಾ

# "ಪತಿ ಸಾಮ್ರಾಜ್ಯ"

●

## ವಾರಕ್ಕೊಮ್ಮೆ ನಗ್ನಕೂಟ ನಡೆಸುವ ವಿಚಿತ್ರ ರಾಣಿ!

●

**ಈ ದ್ವೀಪದಲ್ಲಿ ಸ್ತ್ರೀಯರು ಪುರುಷರ ಬರಿಯ ಭೋಗ ಸಾಧನಗಳು.**

●

### 'ಪತಿ ಸಾಮ್ರಾಜ್ಯ'

ಟಾರೆಸ್ ಸ್ಟ್ರೈಟ್ಸ್ ಎಂಬಲ್ಲಿ ಬಾಡು ಎಂಬೊಂದು ದ್ವೀಪವಿದೆ. ಈ ದ್ವೀಪವನ್ನು ಜನರು 'ಪತಿ ಸಾಮ್ರಾಜ್ಯ'ವೆಂದು ಕರೆಯುವುದಿದೆ.

ಈ ದ್ವೀಪದಲ್ಲಿ ವಿವಾಹಿತ ಪುರುಷನೇ ಅಧಿಕಾರ ನಡೆಸುತ್ತಿದ್ದಾನೆ. ಮಡದಿಯು ಉತ್ತಮಾಹಾರವನ್ನು ಬಡಿಸದಿದ್ದರೆ ಆಕೆಯ ಮೇಲೆ ಸರಕಾರದ ಕಾನೂನು ಕೂಡಲೆ ಜಾರಿ ಮಾಡಲ್ಪಡುವುದು. ಸ್ತ್ರೀಯರು ಯಾವುದಾದರೊಂದು ತಪ್ಪು ಮಾಡಿದರೆ ಆಕೆಗೆ ಕಠಿನ ಶಿಕ್ಷೆಯು ಕೂಡಲೆ ವಿಧಿಸಲ್ಪಡುತ್ತದೆ. ಅಲ್ಲಿಯ ಕೌನ್ಸಿಲಿನವರು ಯಾವ ಸಂದರ್ಭದಲ್ಲಾದರೂ ಗಂಡನನ್ನೇ ಸಮರ್ಥಿಸುವುದಲ್ಲದೆ ಅವರ ಪತ್ನಿಯರಿಗೆ ಬೆಂಬಲವೀಯುವಂತಿಲ್ಲ.

### 'ಪ್ರಮೀಳಾ ರಾಜ್ಯ'

ಹೀಗೆಂದೊಡನೆಯೇ ಆ ದ್ವೀಪವನ್ನು ಪುರುಷರೇ ಆಳುತ್ತಿದ್ದಾರೆಂದು ನೀವು ಭಾವಿಸಬಹುದು. ತಪ್ಪಿದಿರಿ. ಗಂಡಂದಿರಿಗೆ ಇಷ್ಟೆಲ್ಲಾ ಸವಲತ್ತುಗಳನ್ನು ಕೊಡಬೇಕೆಂದು ಆಜ್ಞೆಯೀಯುತ್ತಿರುವ ದ್ವೀಪಾಧಿಪತಿ ಒಬ್ಬ ಹೆಂಗಸು. ಹೆಂಡಂದಿರು ಗಂಡಂದಿರ ದಾಸಾನುದಾಸಿಯರಾಗಿ ಕೆಲಸ ಮಾಡಬೇಕಲ್ಲದೆ ಪುರುಷರು ಹೇಳಿದಂತೆ ಕುಣಿದು, ಅವರ ಭೋಗದ ಸಾಧನಗಳಾಗಿರಬೇಕೆಂದು ಈ ರಾಣಿಯ ಆಶೆಯಾಗಿದೆ.

### ೫೨೦ ಜನರ ದೇಶ.

ಈ ದ್ವೀಪವನ್ನು ಸುಮಾರು ಮೂವತ್ತು ವರುಷಗಳಿಂದ ಆಳಿಕೊಂಡು ಬರುತ್ತಿರುವ ಈ ರಾಣಿಯ ಹೆಸರು 'ಸತೀ ಎಥೆಲ್ ಮೇ ರಹೆಲ' ' ಬಾಡುದ್ವೀಪದಲ್ಲಿ ಒಟ್ಟು ೫೨೦ ದ್ವೀಪ ನಿವಾಸಿಗಳೂ, ೫ ಐರೋಪ್ಯ ಜನರೂ ವಾಸಿಸುತ್ತಾರೆ. ಇವರ ಆಹಾರವೆಂದರೆ ಗೆಣಸು, ಬಾಳೆಹಣ್ಣು ಮತ್ತು ಇತರ ಹಣ್ಣುಹಂಪಲುಗಳಾಗಿವೆ.

### ಕಠಿನ ಜುಲ್ಮಾನೆ.

ಯಾವುದಾದರೊಬ್ಬ ಸ್ತ್ರೀಯು ಪುರುಷನಿಗೆ ಅನ್ಯಾಯ ಮಾಡಿದರೆ ಬಾಡುದ್ವೀಪದ ಕೌನ್ಸಿಲಿನವರು ಅವಳಿಗೆ ಕಠಿನ ಶಿಕ್ಷೆಯನ್ನು ವಿಧಿಸುತ್ತಾರೆ. ಚಿಕ್ಕ ಚಿಕ್ಕ ಅನ್ಯಾಯಗಳಿಗೆ ಜುಲ್ಮಾನೆ ಮಾಡುವುದುಂಟು. ಹೆಂಡತಿಗೆ ಜುಲ್ಮಾನೆಯನ್ನು ಕೊಡಲು ಸಾಧ್ಯವಿಲ್ಲದಿದ್ದರೆ ಗಂಡನಾದರೂ ಕೊಡಬೇಕೆಂಬ ನಿಯಮವಿದೆ. ಈ ನಿಯಮಗಳಿಂದಾಗಿ ಸ್ತ್ರೀಯು ಪುರುಷನನ್ನು ಬಹಳ ಆದರದಿಂದ ನೋಡುತ್ತಿದ್ದಾಳೆ.

### ಧಮದ ಚುಂಬನ

ಬೀದಿಗಳಲ್ಲಿ ಅಲೆದಾಡುವಾಗ ಪುರುಷರು ಸಿಕ್ಕಿದರೆ ಸ್ತ್ರೀಯರು ಲಜ್ಜೆಯಿಲ್ಲದೆ ಅವರನ್ನು ಮುದ್ದಿಸಬೇಕು. ಕೆಲವೊಮ್ಮೆ ಪ್ರಾಣಿಗಳಂತೆ ಬೀದಿಗಳಲ್ಲಿ ಸ್ತ್ರೀ ಪುರುಷರು ಕ್ರೀಡಿಸುವ ವಿಚಿತ್ರ ದೃಶ್ಯಗಳನ್ನೂ ಈ ದ್ವೀಪದಲ್ಲಿ ಕಾಣಬಹುದು. ಸರಕಾರದ ನಿಯಮದಿಂದಾಗಿ ಸ್ತ್ರೀಯರು ಪುರುಷರ ಕ್ರೀಡಾವಸ್ತುಗಳಾಗಿದ್ದಾರೆಂಬುದಕ್ಕೆ ಬೇರೆ ನಿದರ್ಶನಗಳೇ ಬೇಕಾಗಿಲ್ಲ.

### ವಾರಕ್ಕೊಮ್ಮೆ ನಗ್ನ ಕೂಟ.

ಈ ದ್ವೀಪದ ಜನರು ವಾರಕ್ಕೊಮ್ಮೆ ನಗ್ನ ಕೂಟಗಳನ್ನೇರ್ಪಡಿಸುವುದುಂಟು. **ಈ ಕೂಟವು**

ರಾಜಧಾನಿಯ ಒಂದು ಉದ್ಯಾನವನದಲ್ಲಿ ನಡೆಯುತ್ತದೆ. ದ್ವೀಪದಲ್ಲಿರುವ ಐದು ಐರೋಪ್ಯ ನಿವಾಸಿಗಳು ಈ ಕೂಟದ ವ್ಯವಸ್ಥಾಪಕರು. ದ್ವೀಪದ ಎಲ್ಲಾ ಸ್ತ್ರೀಯರು ಆ ದಿನ ತಮ್ಮ ಮನೆಕೆಲಸಗಳನ್ನು ಬಿಟ್ಟು ರಾಜಧಾನಿಗೆ ನಗ್ನ ನೃತ್ಯದಲ್ಲಿ ಭಾಗವಹಿಸಲು ಹೋಗಬೇಕಾಗಿದೆ. ಗಂಡಸರು ತಮ್ಮ ವಿವಿಧ ಸಂಗೀತ ಸಾಧನಗಳನ್ನು ಬಾರಿಸುವಾಗ ಸ್ತ್ರೀಯರು ತಮ್ಮ ವಸನಗಳನ್ನು ಬಿಚ್ಚಿ ಕುಣಿಯುವುದು ಅಲ್ಲಿಯ ಒಂದು ವಾಡಿಕೆಯಾಗಿದೆ. ಈ ಕೂಟದಲ್ಲಿ ಗಂಡಸರು ತಮಗೆ ಇಚ್ಛೆಬಂದಂತೆ ವರ್ತಿಸಬಹುದೆಂಬ ನಿಯಮವಿರುವುದರಿಂದ ನಗ್ನ ಕೂಟವು ಕ್ರೀಡಾಕೂಟವಾಗಿ ಪರಿಣಮಿಸುವುದುಂಟು.



"ನಾಗರಿಕತೆಯ ಬೆಳಕು ಇನ್ನೂ ಹರಿಯದ ಬಾಡುದ್ವೀಪದಲ್ಲಿ—"

**ಮುಸ್ಸೋಲಿನಿಯ ರಾಜ್ಯದಂತೆ—**

ಈ ದ್ವೀಪದಲ್ಲಿ ಜನಸಂಖ್ಯೆಯು ಬಹಳ ಕಡಿಮೆಯಾಗಿರುವುದರಿಂದ ಸೀನರ್ ಮುಸ್ಸೋಲಿನಿಯು ಇಟಲಿಯಲ್ಲಿ ಆಜ್ಞೆಯಿತ್ತಿರುವಂತೆ ಸತೀ ರಾಹೆಲ್ ಕೂಡಾ ತನ್ನ ಪ್ರಜೆಗಳು ಸಾಧ್ಯವಾದಷ್ಟು ಮಕ್ಕಳನ್ನು ಹುಟ್ಟಿಸಬೇಕೆಂದು ತನ್ನ ಕೌನ್ಸಿಲಿನವರಿಂದ ಒಂದು ನಿಯಮ ಮಾಡಿಸಿದ್ದಾಳೆ. ಈ ನಿಯಮದಿಂದಾಗಿ ಪ್ರಾರಂಭದಲ್ಲಿ ಸುಮಾರು ಇನ್ನೂರು ಜನರಿದ್ದ ದ್ವೀಪದಲ್ಲಿ ಈಗ ೫೦೦ಕ್ಕಿಂತಲೂ ಮಿಕ್ಕಿ ಪ್ರಜೆಗಳಾಗಿದ್ದಾರೆ. ಇಟಲಿಯಂತೆಯೇ ಹೆಚ್ಚು ಮಕ್ಕಳನ್ನು ಹೆರುವ ಜನನಿಗೆ ಸತೀ ರಾಹೆಲಳು ಒಂದು ಪ್ರಶಸ್ತಿಯನ್ನು ಪ್ರತಿವರುಷ ಕೊಡುವುದುಂಟು.

**ಬಾಡುದ್ವೀಪದ ಚರ್ಚ್—**

ಸತೀ ರಾಹೆಲ್ ಯುರೋಪಿನ ಒಬ್ಬ ಸ್ತ್ರೀಯಾದುದರಿಂದ ದ್ವೀಪದವರೆಲ್ಲರೂ ಕ್ರೈಸ್ತ ಧರ್ಮವನ್ನೇ ಅನುಸರಿಸಬೇಕೆಂಬ ನಿಯಮಮಾಡಿದ್ದಾಳೆ. ಸಮಗ್ರ ದ್ವೀಪದಲ್ಲಿರುವ ಚರ್ಚೆಂದರೆ ಒಂದೇ ಒಂದು. ಆದಿತ್ಯವಾರ ದಿವಸ ಅಲ್ಲಿಗೆ ಜನರು ಪ್ರಾರ್ಥನೆಗಾಗಿ ಹೋಗಬೇಕಾಗಿದೆ. ಪ್ರಾರ್ಥನೆಯಾಗುವಾಗ ಒಬ್ಬ ದ್ವೀಪನಿವಾಸಿಯು ಉದ್ದದ ಬೆತ್ತ ಹಿಡಿದುಕೊಂಡು ಅತ್ತಿತ್ತ ತಿರುಗಾಡುತ್ತಾ ಯಾರು ಏನೇನು ಮಾಡುವರೆಂಬುದನ್ನು ನೋಡುತ್ತಾನೆ.

**ಪ್ರಾರ್ಥನಾ ಕಾಲದಲ್ಲೂ ಭೋಗ—!**

ದ್ವೀಪದ ವಿಚಿತ್ರ ಕಾನೂನಿನ ಪರಿಣಾಮವಾಗಿ ಕೆಲವು ಪುರುಷರು ದೇವಳದಲ್ಲಿಯೇ ಕ್ರೀಡಿಸುವವನ್ನು ಅಥವಾ ಮುದ್ದಿಸುವುದನ್ನು ಕಂಡರೆ ಬೆತ್ತ ಹಿಡಿದು ತಿರುಗುವವನು ಅವ

ರನ್ನು ಹೊರಕರೆದು ಥಡಿಕೊಡುವು ದುಂಟು.

ಸತೀ ರಾಹೆಲಳ
ಸಾಪ್ತಾಹಿಕ ಕರೆ!—

ದ್ವೀಪದಲ್ಲಿರುವ ಸುಂದರವಾದ ಪುರುಷರು ಬಾಡುದ್ವೀಪದ ರಾಣಿಯ ಬಳಿಗೆ ಹೋಗಬೇಕೆಂಬ ಆಜ್ಞೆಯು ಬರುತ್ತದೆ. ಯಾರು ಸತೀ ರಾಹೆಲಳನ್ನು ಮೆಚ್ಚಿಸಬಲ್ಲರೋ ಅಂಥವರನ್ನು ಆಕೆಯು ಬಾಡು ಕೌನ್ಸಿಲಿನ ಸದಸ್ಯರನ್ನಾಗಿ ಮಾಡುತ್ತಾಳೆ. ಯಾರಾದರೂ ರಾಹೆಲಳ ಕರೆಯನ್ನು ಮನ್ನಿಸದಿದ್ದರೆ ಅವರನ್ನು ಐದು ವರುಷಗಳ ತನಕ ಸೆರೆಮನೆಯಲ್ಲಿಡಬೇಕೆಂಬ ನಿಯಮವಿದೆ. ಹೀಗೆ ಬಾಡು ದ್ವೀಪದ ರಾಜ್ಯಭಾರವು ವಿಚಿತ್ರವಾಗಿರುವುದಿದ್ದರೂ ಸತೀ ರಾಹೆಲಳು ತನ್ನ ವಿಚಿತ್ರ ಧೋರಣೆಯಿಂದ ಪ್ರಜೆಗಳನ್ನು ಆಳಿಕೊಂಡು ಬರುತ್ತಿದ್ದಾಳೆ. ಗಂಡಸರು ಹೆಂಗಸರ ಮೇಲೆ ತಮ್ಮ ಅಧಿಕಾರವನ್ನು ಪೂರ್ಣವಾಗಿ ನಡೆಸಬಲ್ಲ ಸ್ಥಳವು ಸಮಸ್ತ ಜಗತ್ತಿನಲ್ಲಿರುವುದಿದ್ದರೆ ಅದು ಇದೊಂದೇ ದ್ವೀಪವೆಂದು ಬೆಟ್ಟತ್ತಿ ಹೇಳಬಹುದಾಗಿದೆ.

---

ದೂಮ: ಈ ಸಲ ತಮ್ಮಣ್ಣವರೂ ತಿಮ್ಮಣ್ಣನವರೂ ಓಟಿಗೆ ನಿಂತಿದ್ದಾರೆ. . . ನಿಮ್ಮ ಓಟು ಯಾರಿಗೆ?

ಕೋಟ: ನನ್ನ ಒಟ್ಟಿಗೆ ನನ್ನ ಹೆಂಡತಿ.

೦ ೦ ೦

ಒಬ್ಬ: ನೀವು ಮನೆಗೆ ಹೋದ ಕೂಡಲೆ ಹೆಂಡತಿ ನಿಮ್ಮ ಕೋಟನ್ನು ತೆಗೆದಿಡುತ್ತಾಳೊ?

ಮತ್ತೊಬ್ಬ: ಕೋಟನೊಳಗಿದ್ದುದನ್ನು ತೆಗೆದಿಡುತ್ತಾಳೆ.

## ಆರೋಗ್ಯ ಸೂತ್ರಗಳು

ಜೇನು, ಮೈದಾಹಿಟ್ಟು ಇವೆರಡನ್ನೂ ಸೇರಿಸಿ ಹುಣ್ಣಿನ ಮೇಲೆ ಬಳಿದಲ್ಲಿ ಹುಣ್ಣುಗಳು ವಾಸಿಯಾಗುವುವು.

೦ ೦ ೦

ಅಡಿಗೆಗೆ ಉಪಯೋಗಿಸುವ ಉಪ್ಪಿನಿಂದ ಹಲ್ಲುಜ್ಜಿಕೊಂಡಲ್ಲಿ ಹಲ್ಲು ನೋವು ಬರುವುದಿಲ್ಲ.

೦ ೦ ೦

ಪ್ರಯಾಣ ಮಾಡಿದ ಆಯಾಸವನ್ನು ಹೋಗಲಾಡಿಸಿಕೊಳ್ಳಬೇಕಾದಲ್ಲಿ ನಿಂಬೆಹಣ್ಣಿನ ರಸವನ್ನು ಕಾಲು ಹೆಜ್ಜೆಯ ಮೇಲೂ ತೊಡೆಗಳ ಮೇಲೂ ಉಜ್ಜಿಕೊಳ್ಳಬೇಕು.



# ಜಿಲ್ಲಾ ಸಂಚಾರಿಯ ಡೈರಿಯಿಂದ

ನೋಕ್ಯಾಂ: ಮಂಗಳೂರು.

∴

**ನಾರುವ ಜಿಲ್ಲೆ!**

"ಶ್ರೀ. ಕಮಲಾದೇವಿ ಮತ್ತು ಶ್ರೀನಿವಾಸ ಮಲ್ಯರ ಧೋರಣೆ ಮತ್ತು ವರ್ತನೆಯಿಂದಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಾಂಗ್ರೆಸೆಂಬುದು ಕೊಳೆತು ನಾರಹತ್ತಿದೆ."

—ರಾಷ್ಟ್ರಬಂಧುವಿನಲ್ಲಿ ಶ್ರೀ. ಕೆ. ಕೆ. ಶೆಟ್ಟರು.

'ಕೊಳೆತು ನಾರುವ' ವರೆಗೆ ಶ್ರೀ. ಶೆಟ್ಟರು ಮೂಗನ್ನೊತ್ತಿ ಹಿಡಿದು ಕೊಂಡಿರುವುದು ಬಹಳ ಆಶ್ಚರ್ಯಕರ ಸಂಗತಿ. ಆದರೆ ಮದ್ದಿಲ್ಲದ ಈ ರೋಗದ ಹೆಸರನ್ನು ನಾನು ಕೇಳಿರುವುದು ಇದೇ ಪ್ರಥಮ ಬಾರಿಯಾಗಿದೆ.

**ಸತ್ಯ ಮತ್ತು ಅಹಿಂಸೆಯ ಇನ್ನೊಂದು ಮಾದರಿ**

ದಿಲ್ಲಿಯಲ್ಲಿ ನಡೆದ ಅಖಿಲಭಾರತ ಕಾಂಗ್ರೆಸ್ ಕಮಿಟಿ ಸಭೆಯಲ್ಲಿ ಸಂಸ್ಥಾನಗಳ ಕುರಿತಾದ ನಿರ್ಣಯದ ಕುರಿತು ಬರೆಯುತ್ತಾ ಶ್ರೀ ಕಮಲಾದೇವಿಯರು ಹೀಗಂದಿದ್ದಾರೆ:- 'ಪತ್ರಿಕೆಯವರಾದರೊ ವಿಶೇಷ ಬಹುಮತದಿಂದ ಬಿದ್ದು ಹೋಯಿತೆಂದು ಬರೆಯುವುದೊಂದು ಸತ್ಯ ಮತ್ತು ಅಹಿಂಸೆಯ ಮಾದರಿ'

ಪತ್ರಿಕೆಗಳ ಸತ್ಯ ಮತ್ತು ಅಹಿಂಸೆಗಿಂತ ಶ್ರೀ. ಕಮಲಾದೇವಿಯರ ಧೋರಣೆಯ 'ಸತ್ಯ ಮತ್ತು ಅಹಿಂಸೆ'ಯು ಮತ್ತಷ್ಟು ವಿಚಿತ್ರವಾಗಿದೆಯೆಂದು ಯಾರಿಗೆ ತಾನೇ ಗೊತ್ತಿಲ್ಲ?

**ಬೇಲಿ ತಿಂದ ಪೈರಿನ ಸುದ್ದಿಯಿಲ್ಲ.**

ದಕ್ಷಿಣಕನ್ನಡ ಜಿಲ್ಲಾ ಕಾಂಗ್ರೆಸ್ ಕಮಿಟಿಯಿಂದ ಕಾಂಗ್ರೆಸ್ ಸದಸ್ಯತನದ ಪುಸ್ತಕಗಳನ್ನು ಹಿಂದೆ ಕೊಡದ ಹಲವರ ಮೇಲೆ ಜಿಲ್ಲಾ ಕಾಂಗ್ರೆಸ್ ಕಮಿಟಿಯು ಬಲವಾಗಿ ಠರಾಯಿಸಿ ಬಿಟ್ಟಿದೆ. ಆದರೆ ೧೯೩೫–೩೬ ಮತ್ತು ೧೯೩೬—೩೭ರಲ್ಲಿ ಶ್ರೀಗಳಾದ ಕಮಲಾದೇವಿ ಮತ್ತು ಮಲ್ಯರು ಹಿಂದೆಕೊಡದ ಪುಸ್ತಕಗಳ ಸುದ್ದಿಯೇ ಇಲ್ಲ. ಕಾರಣ ಹಿಂದಿನ ಪುಸ್ತಕಗಳನ್ನು ನೋಡಿ ಠರಾವನ್ನು ತರುವವರಿಲ್ಲ. ಬೇಲಿ ತಿಂದ ಪೈರಿನ ಸುದ್ದಿಯೇ ಇಲ್ಲದಿರುವುದರಲ್ಲಿ ಆಶ್ಚರ್ಯವೇನಿದೆ?

*

**ಪಾರ್ಲಿಮೆಂಟರಿ ಬೋರ್ಡಿನ ಮಾಯವಾದ ಲೆಖ್ಖಪತ್ರ**

ದಕ್ಷಿಣ ಕನ್ನಡ ಜಿಲ್ಲಾ ಕಾಂಗ್ರೆಸ್ ಪಾರ್ಲಿಮೆಂಟರಿ ಬೋರ್ಡು ಎಂಬುದು ಕಳೆದ ಎಸೆಂಬ್ಲಿ ಚುನಾವಣಾ ಕಾಲದಲ್ಲಿ ಸ್ಥಾಪಿಸಲ್ಪಟ್ಟಿತು. ಈ ಪಾರ್ಲಿಮೆಂಟರಿ ಬೋರ್ಡಿನಲ್ಲಿ ಈಗಿನ ಜಿಲ್ಲಾ ಕಮಿಟಿ ಅಧ್ಯಕ್ಷರಾದ ಶ್ರೀ. ಶ್ರೀನಿವಾಸ ಮಲ್ಯರು ಜನರಲ್ ಸೆಕ್ರೆಟರಿಯರಾಗಿದ್ದರು. ಜಿಲ್ಲಾ ಬೋರ್ಡು ಅಧ್ಯಕ್ಷರಾಗಿರುವ ಡಾ। ವಿಠಲ ಶೆಟ್ಟರು ಅಧ್ಯಕ್ಷರಾಗಿದ್ದರು. ಈ ಪ್ರಭೃತಿಗಳಲ್ಲದೆ ಶ್ರೀ ಕಮಲಾದೇವಿ ಡಾ| ಯು. ಪಿ. ಮಲ್ಯ. ಶ್ರೀಗಳಾದ ಹಿ. ರಾ. ಮಲ್ಯ, ಭೋಜರಾವ್ ಬೋಳಾರ, ಮೊದಲಾದ ಕೆಲವುಮಹನೀಯರು ಕೂಡಾ ಇದರ ಅಧಿಕಾರಿಗಳಾಗಿದ್ದರು. ಚುನಾವಣೆಯಾಯಿತು ಕಾಂಗ್ರೆಸಿಗೆ ಜಯ ಸಿಕ್ಕಿತು. ಕೊನೆಗೆ ಲೆಖ್ಖಪತ್ರಗಳನ್ನು ಪ್ರಕಟಿಸುವ ಸುದ್ದಿ ಬಂತು. ಲೆಖ್ಖಪತ್ರಗಳಿದ್ದರಲ್ಲವೆ ಪ್ರಕಟಿಸುವುದು? ಜನರಲ್ ಸೆಕ್ರೆಟರಿಯರಾದ ಶ್ರೀ. ಶ್ರೀನಿವಾಸ ಮಲ್ಯರು ತಬ್ಬಿಬ್ಬಾದರು. ಲೆಖ್ಖಪತ್ರಗಳನ್ನು ನಿರ್ಮಾಣಮಾಡುವರೆಂಬ ಸುದ್ದಿಯು ಕೇಳಿಸಿತು. ಆದರೆ ಬಹಳ ಕಷ್ಟದ ಸಂಗತಿಯಾದುದರಿಂದ ಅಧಿಕಾರಿಗಳು ಹೊಣೆಗಾರಿಕೆಯ ಕಾಲ್ಚೆಂಡನ್ನು ಒಬ್ಬರಿಂದ ಇನ್ನೊಬ್ಬರಿಗೆ ಹಾರಿಸಿದರು, ಚೆಂಡು ಹಾರಿ ಹಾರಿ ಯಾವುದೋ ಒಂದು ಬಾವಿಗೆ ಬಿದ್ದುಹೋಯಿತು. ಶಿಸ್ತಿನ ಅಪರಾವತಾರದಂತಿರುವ ಶ್ರೀ. ಶ್ರೀನಿವಾಸ ಮಲ್ಯರು ಈ ಕುರಿತು ಉಸಿರೆತ್ತುವದಿಲ್ಲ. ಡಾ| ವಿಟ್ಠಲ ಶೆಟ್ಟರು "ಪೂರಾ ಜನರಲ್ ಸೆಕ್ರೆಟರಿಯರಿಗೆ ಗೊತ್ತು. ನನಗದರ ಅರಿವೇ ಇಲ್ಲ." ಎನ್ನುವರು. ಶ್ರೀ ಹಿ. ರಾ ಮಲ್ಯರು ಮೌನವಾಗಿದ್ದಾ

ರೆ. ಹೀಗೆ ಪಾರ್ಲಿಮೆಂಟರಿ ಬೋರ್ಡಿನ ಲೆಖ್ಖಪತ್ರಗಳು ಮಾಯವಾಗಿವೆ! ಇದು ಶ್ರೀ ಕಮಲಾದೇವಿಯವರ 'ಸತ್ಯ ಮತ್ತು ಅಹಿಂಸೆ'ಯ ಒಂದು ಅನುಕರಣೆಯೇ?

### “ಲೋರಿ ವ್ಯವಹಾರದ ಡಿಕ್ಟೇಟರ್!”

ದಕ್ಷಿಣ ಕನ್ನಡ ಡಿಸ್ಟ್ರಿಕ್ಟ್ ಬೋರ್ಡಿನ ಇಂಜಿನಿಯರರು ಲೋರಿ ವ್ಯವಹಾರದ ಡಿಕ್ಟೇಟರರಾದದು ಅತ್ಯಂತ ಆಶ್ಚರ್ಯಜನಕವೂ ನಿರಾಶಾಜನಕವೂ ಆಗಿದೆ.” ಎಂದು ಸ್ವತಂತ್ರ ಭಾರತದ ಸಂಪಾದಕರ ಬೇಸರದ ಟೀಕೆ.

ಪ್ರಾಯಶಃ ಇಂಜಿನೀಯರರು ಜಿಲ್ಲೆಯ ಕಾಂಗ್ರೆಸ್ ಡಿಕ್ಟೇಟರರನ್ನು ಅನುಕರಿಸಿ ಹೀಗೆ ಮಾಡಿರಬಹುದೆಂದು ನನ್ನೂಹೆ!

*

### ದಕ್ಷಿಣ ಕನ್ನಡದಲ್ಲಿ ರಷ್ಯನ್ ವಿಧಾನಗಳು!

ಸೊವಿಯೆಟ್ ರಷ್ಯದಲ್ಲಿ ಹಲವು ಅಧಿಕಾರಿಗಳು ಅನೀರಿಕ್ಷಿತವಾಗಿ ತೆಗೆದು ಹಾಕಲ್ಪಡುವುದುಂಟು. ಹಾಗೆಯೇ ದಕ್ಷಿಣ ಕನ್ನಡ ಜಿಲ್ಲಾ ಕಾಂಗ್ರೆಸ್ ಕಮಿಟಿಯ ಅಧಿಕಾರಿಗಳು ಕೂಡಾ ಅನಿರೀಕ್ಷಿತವಾಗಿ ರಾಜಿಕೊಡಲಾರಂಭಿಸಿದ್ದಾರೆ. (ಇನ್ನೊಂದು ವಿಧದಲ್ಲಿ ಹೇಳುವುದಿದ್ದರೆ ತೆಗೆದು ಹಾಕಲ್ಪಡುತ್ತಾರೆ.) ಉದಾಹರಣೆಗಾಗಿ ಉಪಾಧ್ಯಕ್ಷರಾಗಿದ್ದ ಶ್ರೀ ಮಹಾಬಲ ಹೆಗ್ಡೆಯವರು ಹೊರಗಾದರು. ಶ್ರೀ. ಉಮೇಶರಾಯರು ಹೊರಗೆ ಹೋದರು. ಶ್ರೀ. ಕೆ. ಕೆ. ಶೆಟ್ಟರು ಒಂದು ಕಾಲು ಹೊರಗೆ ಇನ್ನೊಂದು ಒಳಗಿಟ್ಟು 'ಹೋಗುತ್ತೇನಯ್ಯಾ, ಬಿಡಿರಿ' ಎನ್ನುತ್ತಿದ್ದಾರೆ. ಇದೂ ಒಂದು ತರದ “Purge”!

### ಲೆಖ್ಖಪುಸ್ತಕಗಳ ಗಾಢ ನಿದ್ರೆ!

ಮನುಷ್ಯರು. ಕಾಂಗ್ರೆಸ್ ಕಮಿಟಿಯವರು ನಿದ್ದೆ ಮಾಡುವುದಂತಿರಲಿ. ಲೆಖ್ಖಪುಸ್ತಕಗಳು ಕೂಡಾ ನಿದ್ರೆ ಮಾಡಲಾರಂಭಿಸಿವೆ. ಉಡುಪಿ ತಾಲೂಕು ಕಾಂಗ್ರೆಸ್ ಕಮಿಟಿಯ ಲೆಖ್ಖಪುಸ್ತಕಗಳನ್ನು ಕಾಂಗ್ರೆಸ್ ಕಮಿಟಿಯವರು ಎಷ್ಟು ಎಚ್ಚರಿಸಿದರೂ ಅವುಗಳು ಏಳುವುದಿಲ್ಲವಂತೆ. ಜಿಲ್ಲಾ ಕಾಂಗ್ರೆಸ್ ಕಮಿಟಿಯು ಪಾರ್ಲಿಮೆಂಟರಿ ಬೋರ್ಡನ್ನು ಕಂಡಷ್ಟೇ ಪ್ರೀತಿಯಿಂದ ಉಡುಪಿ ತಾಲೂಕು ಕಾಂಗ್ರೆಸ್ ಕಮಿಟಿಯನ್ನೂ ಕಾಣುತ್ತಿರುವುದರಿಂದ ಎಚ್ಚರಿಸುವ ಗೊಡವೆಗೇ ಹೋಗುವುದಿಲ್ಲ! ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯು ಅಧೀನಸಂಸ್ಥೆಗಳ ವ್ಯವಸ್ಥೆಯು ಹೇಗಿದೆಯೆಂಬುದನ್ನು ನೋಡುವ ಗೊಡವೆಗೇ ಹೋಗುವುದಿಲ್ಲ. ವ್ಯವಸ್ಥೆಯ ಪ್ರಥಮ ಹೊಸ್ತಿಲೇ ಅಲುಗಾಡುತ್ತಿರುವಾಗ “ವ್ಯವಸ್ಥೆ, ಶಿಸ್ತು!”ಗಳೆಂದು ಬೊಬ್ಬಿಡುತ್ತಿರುವ ಅರ್ಥವು ಅವರಿಗೇ ಗೊತ್ತು!

---

(೫ನೆ ಪುಟದಿಂದ)

ಸಿಟೆದ ೬ ಪೆನ್ನಿಯ ಒಂದು ಚೀಟು. ಮಸುಕಾಗಿರುವುದರಿಂದ ಇದರ ಪೂರ್ಣ ವಿವರಗಳನ್ನು ಹೇಳಲಾಗುವುದಿಲ್ಲ. ಎರಡು ಬಾರಿ ಮುದ್ರಿಸಲ್ಪಟ್ಟಿರುವುದರಿಂದ ಇದರ ವಿಶೇಷತೆಯನ್ನು ಇನ್ನೂ ಪರೀಕ್ಷಿಸುತ್ತಿದ್ದಾರೆ.

೧೮೫೦ರ ೯ ಪೆನ್ನಿಯ ಬ್ರಿಟಿಷ್ ಚೀಟೊಂದು ಇತ್ತೀಚೆಗೆ ಒಬ್ಬ ಸಂಗ್ರಾಹಕರಿಗೆ ಸಿಕ್ಕಿದೆ. ಇದರ ಅಸ್ಪಷ್ಟತೆಯಿಂದಾಗಿ ಈ ಚೀಟಿನ ಬೆಲೆಯು ಇನ್ನೂ ನಿರ್ಣೈಸಲ್ಪಡಲಿಲ್ಲ.

ಚೀಟು ಸಂಗ್ರಹಿಸಲಿಚ್ಛಿಸುವವರು ಈ ಕುರಿತು ಬರೆಯಲ್ಪಟ್ಟಿರುವ ಹಲವು ಪುಸ್ತಕಗಳಲ್ಲಿ ಒಂದನ್ನು ತರಿಸಬಹುದಾಗಿದೆ.

---

### ನನಗರಿಯದು-ನಿಮಗೆ



ಪ್ರವೋ-ದೂತನಿಗೆ ಸಂಬಳವೆಷ್ಟು?

---

### ಜ್ಞಾಪಕಕ್ಕೆ ಬಾರದ ವೃತ್ತಿ.

ರೈಲು ಸ್ಟೇಶನಿನಲ್ಲಿ ಟಿಕೇಟು ಕೊಡುವ ಗುಮಾಸ್ತ:— ಯಾವ ಊರಿಗೆ? ಈರೋಡಿಗೇನು?

ಭೂಗೋಳ ತಿಳಿಸುವ ಉಪಾಧ್ಯಾಯ (ಪರಧ್ಯಾನಾಸಕ್ತನಾಗಿ):- ಏನು? ಏನು? ಈರೋಡೇನು? ಅದು ಒಂದು ತಾಲೂಕಿನ ಮುಖ್ಯ ಸ್ಥಳವು. ಇಲ್ಲಿ ಒಂದು ಮ್ಯುನಿಸಿಪಾಲಿಟಿಯು ಅರುವುದು. ತಾಲೂಕು ಕಚೇರಿಯು ಕೂಡ ಇರುವುದು. ಆ ಊರಿನ ಜನಸಂಖ್ಯೆ .... ....!

# ಜಗತ್ತಿನ ರಹಸ್ಯಗಳನ್ನು ತಿಳಿಯುವ ಗುಪ್ತಚಾರರು!

## ಪ್ಯಾರಿಸ್ ನಗರದಲ್ಲಿ ೨,೦೦೦ ಜನರನ್ನು ಸೆರೆಹಿಡಿದರು!

### ಕಣ್ಣಿಗೆ ಕಾಣಿಸದ ಮಸಿ! ಯಾರಿಗೂ ತಿಳಿಯದ ಲಿಪಿ!

ಈಗಿನ ಅಂತರ್ ರಾಷ್ಟ್ರೀಯ ಪರಿಸ್ಥಿತಿಯ ಪ್ರಾಮುಖ್ಯತೆಯನ್ನು ಮನಗಂಡು ಫ್ರೆಂಚ್ ಅಧಿಕಾರಿಗಳು ತಮ್ಮ ದೇಶದಲ್ಲಿದ್ದುಕೊಂಡು ಪರರಾಷ್ಟ್ರಗಳ ಅಧಿಕಾರಿಗಳಿಗೆ ಬಹಳ ಉಪಯುಕ್ತ ರಹಸ್ಯಗಳನ್ನು ತಿಳಿಸುತ್ತಿರುವ ಗುಪ್ತಚಾರಕರನ್ನು ಏಕಪ್ರಕಾರವಾಗಿ ಸೆರೆ ಹಿಡಿಯುತ್ತಿದ್ದಾರೆ.

**ಸೆರೆಮನೆಗಳಿಲ್ಲ!**

ಪ್ಯಾರಿಸಿನ ಪ್ರಚಂಡ ಸೆರೆಹಿಡಿತದಿಂದಾಗಿ ಕೈದುಮಾಡಲ್ಪಟ್ಟ ಸೆರೆಯಾಳುಗಳನ್ನು ತುಂಬಲು ಸೆರೆಮನೆಗಳಿಲ್ಲದಂತಹ ಪರಿಸ್ಥಿತಿಯು ಬಂದೊದಗಿದೆ.

**೨೦೦೦ ಕೈದಿಗಳು!**

ಈಗಾಗಲೆ ಕೆಲವು ದಿವಸಗಳಿಂದ ಪ್ರಾರಂಭಿಸಿದ ಶೋಧನೆಯಿಂದಾಗಿ ೬೦೦೦ ಜನರನ್ನು ಸೆರೆಹಿಡಿದಿದ್ದಾರೆ. ಸೆರೆಮನೆಗಳಿಲ್ಲದೆ ಫ್ರೆಂಚ್ ಸರಕಾರವು ಸೈನಿಕರ ನಿವಾಸ ಸ್ಥಳಗಳನ್ನು ತತ್ಕಾಲಿಕ ಸೆರೆಮನೆಗಳಾಗಿ ಮಾರ್ಪಡಿಸಲು ಆಜ್ಞೆಯಿತ್ತಿದೆ. ಸೈನ್ಯವು ಫ್ರಾನ್ಸಿನ ಗಡಿನಾಡಿನೆಡೆಗೆ ಹೋಗಲಾರಂಭಿಸಿದೆ.

**ವಿಚಿತ್ರ ಮಸಿಗಳು,**
**ನವೀನ ಅಕ್ಷರಗಳು!**

ಫ್ರಾನ್ಸಿನ ಚತುರ ಗುಪ್ತಚಾರರು ಸೆರೆಹಿಡಿಯಲ್ಪಟ್ಟವರು ಉಪಯೋಗಿಸುವ ಅಕ್ಷರಗಳ ರಹಸ್ಯಗಳನ್ನು ಕಂಡು ಹಿಡಿಯಲಾಗದೆ ದಿಙ್ಮೂಢರಾಗಿದ್ದಾರೆ. ಕೆಲವರು ಕಣ್ಣಿಗೆ ಕಾಣಿಸದಂತಹ ಒಂದು



ಗಾಂಧಿಜಿಯವರ ಅಹಿಂಸಾತ್ಮಕ ವಿಧಾನವೇ ಜಗತ್ತಿಗೆ ಶಾಂತಿಯನ್ನು ಕೊಡಬಲ್ಲುದೆಂದು ಹೇಳಿರುವ
**ಜಾರ್ಜ್ ಲ್ಯಾನ್ಸ್‌ಬರಿ**

ವಿಚಿತ್ರಮಸಿಯನ್ನು ಉಪಯೋಗಿಸುತ್ತಿದ್ದಾರೆ. ಇನ್ನು ಕೆಲವರು ಇಷ್ಟರ ತನಕ ಯಾರಿಗೂ ತಿಳಿಯದಂತಹ ಅತ್ಯಂತ ನಿಗೂಢವಾದ ಲಿಪಿಗಳಲ್ಲಿ ಬರೆಯುತ್ತಿದ್ದಾರೆ. ಫ್ರೆಂಚ್ ಚಾಣಾಕ್ಷರಾದ ಹಲವು ಅಧಿಕಾರಿಗಳು ಈ ರಹಸ್ಯವನ್ನು ಕಂಡುಹಿಡಿಯಲಾರದೆ ತಬ್ಬಿಬ್ಬಾಗಿದ್ದಾರೆ.

**ಅಂಗಿಯಲ್ಲಿ ಅಕ್ಷರಗಳು!**

ಒಬ್ಬ ಸೆರೆಯಾಳನ್ನು ಪರೀಕ್ಷಿಸುವಾಗ ಅವನ ಶರ್ಟ್ ಮತ್ತು ಕೈವಸ್ತ್ರಗಳಲ್ಲಿ ಫ್ರೆಂಚ್ ಸರಕಾರದ ಹಲವು ರಹಸ್ಯಗಳು ಬರೆಯಲ್ಪಟ್ಟಿದ್ದವು. ಸೆರೆಯಾಳುಗಳ ಝಡ್ತಿ ಮಾಡುತ್ತಿದ್ದಾಗ ಒಬ್ಬ ಕೈದಿಯು ಗೋಡೆಯ ಸಮೀಪವಿರುವ ಕಿಟಕಿಯೊಂದರಲ್ಲಿ ಕೆಲವು ಬಟ್ಟೆಗಳನ್ನು ಹೊರತಳ್ಳುತ್ತಿದ್ದನಂತೆ.

**ಸ್ತ್ರೀಯರ ಉಪಾಯಗಳು!**

ಕೆಲವು ಸ್ತ್ರೀ ಗುಪ್ತಚಾರಿಣಿಯರು ತಮ್ಮ ಪೆಟ್ಟಿಗೆಗಳ ಒಳಭಾಗದಲ್ಲಿ ಕಾಗದವನ್ನು ಹಚ್ಚಿ, ಕಾಗದದ ಒಳಭಾಗದಲ್ಲಿ ತಮಗೆ ಬೇಕಾದುದನ್ನು ಬರೆದಿದ್ದರು.

**ಅಸದೃಶ ಬರೆಹ.**

ಇನ್ನೊಬ್ಬ ಕೈದಿಯೊಡನೆ ಒಂದು ಪುಸ್ತಕವಿತ್ತು. ಅದರಲ್ಲಿ ಕಾಗದಗಳನ್ನು ಸೂಕ್ಷ್ಮದರ್ಶಕ ಯಂತ್ರದಿಂದ ನೋಡಿದಾಗ ಕೆಲವು ಅಕ್ಷರಗಳು ಕಾಣಿಸುತ್ತಿದ್ದವು. ಫ್ರೆಂಚ್ ಅಧಿಕಾರಿಗಳು ಈ ಮಸಿಯ ರಹಸ್ಯ

ವನ್ನು ಕಂಡುಹಿಡಿಯಲು ಎಷ್ಟು ಪ್ರಯತ್ನಿಸಿದರೂ ಅವರ ಯತ್ನವು ಫಲಕಾರಿಯಾಗಲಿಲ್ಲ. ಕೈದಿಯನ್ನು ಬೆದರಿಸಿ ರಹಸ್ಯವನ್ನು ಹೇಳೆಂದು ಒತ್ತಾಯಪಡಿಸಿದರೆ ಪ್ರಾಣಹೋದರೂ ಹೇಳಲಾರೆನೆಂದು ಆವನುತ್ತರ.

**ಬ್ರಿಟಿಷರ ಗುಪ್ತವಿಧಾನ ಬಯಲಾಯಿತು!**

ಇನ್ನು ಕೆಲವು ಸೆರೆಯಾಳುಗಳನ್ನು ಪರೀಕ್ಷಿಸುವಾಗ ಅವರೊಡನೆ ಬಹಳ ಪ್ರಭಾವಯುಯ ವಯರ್‌ಲೆಸ್ ರಿಸಿವರ್ ಮತ್ತು ಟ್ರಾನ್ಸ್‌ಮಿಟಿಂಗ್ ಸೆಟ್ಟುಗಳಿದ್ದವು. ಹೆಚ್ಚಿನ ಗುಪ್ತಚಾರರೊಡನೆ ಸ್ವಿಝರ್‌ಲೇಂಡಿನ ಪಾಸ್ ಪೋರ್ಟಿರುವುದರ ರಹಸ್ಯವು ಫ್ರೆಂಚರಿಗೆ ಇನ್ನೂ ತಿಳಿಯಲಿಲ್ಲ. ಒಬ್ಬ ಕೈದಿಯೊಡನೆ ಬ್ರಿಟನಿನ ಜಲ ಮತ್ತು ಆಕಾಶಪಡೆಯ ಬಹು ವಿಧದ ಬರೆಹಗಳಿದ್ದುವು. ಈ ಬರೆಹಗಳನ್ನು ಫ್ರೆಂಚ್ ಸರಕಾರವು ಸದ್ಯದಲ್ಲಿಯೇ ಬ್ರಿಟಿಷರಿಗೆ ಕೊಡುವುದೆಂದು ತಿಳಿಯಲಾಗಿದೆ. ಫ್ರೆಂಚ್ ಸರಕಾರದವರು ಆ ಮನುಷ್ಯನು ಜರ್ಮನ್ ಗುಪ್ತಚಾರಕನೆಂಬ ಸಂಶಯಕ್ಕೊಳಗಾಗಿದ್ದಾರೆ.

# ನವೀನ ಜೇನುಹುಳುಗಳ ನಿರ್ಮಾಣ ಚುಚ್ಚುವುದಿಲ್ಲ, ಕಚ್ಚುವುದಿಲ್ಲ!

## ಚುಚ್ಚಲಾರದ ನೊಣಗಳು!

### ವಿಜ್ಞಾನಿಗಳ ವಿಚಿತ್ರ ಶೋಧೆ!

ಬ್ರಿಟಿಷ್ ವಿಜ್ಞಾನಿಗಳು ಜೇನನ್ನು ಹೆಚ್ಚಿಸುವುದಕ್ಕಾಗಿ ಚುಚ್ಚಲಾರದ ಜೇನುನೊಣಗಳನ್ನು ಸಾಕುವ ಏರ್ಪಾಡು ಮಾಡಿದ್ದಾರೆ.

ಈ ಯತ್ನದಲ್ಲಿ ಯಶಸ್ವಿಯಾಗುವುದಕ್ಕಾಗಿ 'ಎಂಟೋಮೊಲೊಜಿ ಮತ್ತು ಪ್ಲೇಂಟ್ ಕ್ವಾರಂಟ್ಯಾನ್ ಬ್ಯೂರೋ'ವಿನ ತಜ್ಞರು ಜೇನು ನೊಣಗಳ ಭೋಗಾದಿ ವಿಧಾನಗಳನ್ನು ಪೂರ್ಣವಾಗಿ ಬದಲಾಯಿಸಿದ್ದಾರೆ.

ಇಷ್ಟರ ತನಕ ರಾಣಿ ಹುಳುವು ಗೂಡಿನಲ್ಲಿರಬಹುದಾದ ಅತ್ಯಂತ ಶಕ್ತಿಪೂರ್ಣ ಗಂಡು ಹುಳುವಿನೊಡನೆ ಕ್ರೀಡಿಸುವ ಕ್ರಮವಿತ್ತು. ಅಲ್ಲದೆ ಕ್ರೀಡೆಯಾದೊಡನೆ ರಾಣಿ ಹುಳುವು ಗಂಡು ಹುಳುವನ್ನು ಕೊಲ್ಲುತ್ತಿತ್ತು.

### ಪ್ರಚಂಡ ಸ್ಪರ್ಧೆ

ಗಂಡು ಹುಳುಗಳು ಕ್ರೀಡೆಯ ಬಳಿಕ ತಮ್ಮ ಅಂತಿಮಾವಸ್ಥೆಯನ್ನು ಹೊಂದುವುದಿದ್ದರೂ ಎಲ್ಲಾ ಗಂಡು ಹುಳುಗಳು ರಾಣಿ ಹುಳುವಿನೊಡನೆ ಕ್ರೀಡಿಸಲು ತನ್ಮೊಳಗೆ ಪ್ರಚಂಡವಾಗಿ ಸ್ಪರ್ಧಿಸುತ್ತಿದ್ದುವು. ವಿಜ್ಞಾನಿಗಳು ಈ ರಹಸ್ಯವನ್ನು ತಿಳಿದು ಜೇನು ತಯಾರಿಸುವ ಹುಳುಗಳು ತಮ್ಮ ಕೆಲಸಕ್ಕೆ ಕೊಡುವ ಲಕ್ಷ್ಯಕ್ಕಿಂತ ಹೆಚ್ಚು ಲಕ್ಷ್ಯವನ್ನು ಕ್ರೀಡೆಗೆ ಕೊಡುತ್ತಿವೆಯೆಂದು ಭಾವಿಸಿ ಅವುಗಳ ಜೀವನದಲ್ಲೇ ಒಂದು ಬದಲಾವಣೆಯನ್ನು ಮಾಡಿದರು.

ಜೇನು ಗೂಡಿನಲ್ಲಿ ಇತರ ಹುಳುಗಳು ಶೇಖರಿಸಿಡುವ ಜೇನನ್ನು ತಿಂದು, ಸೊಕ್ಕಿ, ರಾಣಿ ಹುಳುವಿನೊಡನೆ ಭೋಗಿಸುವುದು ಮಾತ್ರ ಗಂಡು ಹುಳುವಿನ ಕೆಲಸವಾದುದರಿಂದ ಅದು ಜನರಿಗೆ ಚುಚ್ಚುವ ಕೆಲಸವನ್ನು ಬಹು ಕಠಿನವಾಗಿ ಮಾಡುತ್ತಿದೆಯೆಂದು ವಿಜ್ಞಾನಿಗಳಿಗರಿಯಿತು. ಆದುದರಿಂದ ತಜ್ಞರು ಚುಚ್ಚದಂತಹ ಹುಳುಗಳನ್ನು ಅಧಿಕವಾಗಿ ಸಾಕಲಾರಂಭಿಸಿದ್ದಾರೆ.

### ಬಲವತ್ತರವಾದ ಕಾರಣ!

ಸೈನ್ಸ್ ಟೀಚರ್:— ರಾಮರಾವ್, ಈ ಸೀಸೆಯಲ್ಲಿರುವ ದ್ರಾವಕದಲ್ಲಿ ಈ ರೂಪಾಯಿ ಹಾಕುತ್ತೇನೆ. ಈ ರೂಪಾಯಿಯು ದ್ರಾವಕದಲ್ಲಿ ಕರಗಿ ಹೋಗುವುದೇ? ಇಲ್ಲವೇ? ಹೇಳು.

ರಾಮ ರಾವ್:- ಕರಗದು ಸಾರ್!

ಸೈನ್ಸ್ ಟೀಚರ್:— ಏತಕ್ಕೆ ಕರಗದು? ಕಾರಣ ಹೇಳು.

ರಾಮ ರಾವ್:— ಅದು ಕರಗಿ ಹೋಗುವುದಾದಲ್ಲಿ ಅದನ್ನು ತೆಗೆದು ಕೊಂಡು ಹೋಗಿ ನೀವು ಆ ದ್ರಾವಕದಲ್ಲಿ ಹಾಕುವಿರಾ?

# ಗಾಂಧಿಜಿಯವರ ಅನಂತರ ಭಾರತದ ಭವಿತವ್ಯ





## ರಾಜಕಾರಣದ ರಥವನ್ನು ನೆಹರುಗಳು ನಡೆಸಬಲ್ಲರೆ?



## ಅಹಿಂಸಾತ್ಮಕ ವಾತಾವರಣದಲ್ಲಿ ಹಿಂಸೆಯ ಕಾರ್ಮೋಡಗಳು ಸುಳಿಯುವುವೆ?

ಗಾಂಧಿಜಿಯವರ ಜೀವನಾನಂತರ ಭಾರತದ ಪರಿಸ್ಥಿತಿಯು ಹೇಗಾಗಬಹುದೆಂಬುದು ದೀರ್ಘ



ದೃಷ್ಟಿಯುಳ್ಳ ಅದೆಷ್ಟೋ ಮಂದಿ ಕೇಳುವ ಒಂದು ಪ್ರಶ್ನೆಯಾಗಿದೆ.

ವಿಶಾಲಭಾರತದಲ್ಲಿ ವಿವಿಧ ಶಕ್ತಿಪ್ರವಾಹಗಳು ಪ್ರವಹಿಸುತ್ತಿವೆ. ಇಂದು ಅಹಿಂಸೆಯ ನಿರ್ಮಲ ಜಲ ತುಂಬಿರುವ ರಾಜಕಾರಣದ ಸರೋವರವು ಗಾಂಧಿಜಿಯವರ ಜೀವನಾನಂತರ ಕ್ರಾಂತಿಯ ರಕುತಜಲದಿಂದ ತುಂಬಬಹುದೆ? ಹತೋಟಿಯಿಲ್ಲದೆ ಸಿಕ್ಕಿಬಿಟ್ಟ ನಲಿಯುತ್ತಿರುವ ಅಂಥ ವಿಶ್ವಾಸಗಳು ಪುನಃ ತಮ್ಮ ಪೈಶಾಚಿಕ ನೃತ್ಯವನ್ನು ಮಾಡಬಲ್ಲುವೆ?– ಎಂಬುದು ಈ ಲೇಖನದಲ್ಲಿ ಚರ್ಚಿಸಲ್ಪಟ್ಟಿದೆ.

ಬರೆದವರು: ಶ್ರೀ. 'ಕೌಶಿಕ'.

ಇತ್ತೀಚೆಗೆ ಮಹಾತ್ಮಾಜಿಯವರು ಸತ್ಯಾಗ್ರಹ ವಿಧಾನದ ಕುರಿತು ಬರೆಯುತ್ತಾ ಸತ್ಯಾಗ್ರಹಿಗಳ ಏಕಮಾತ್ರ ನಿಧಿಯೆಂದರೆ ಅವರ ಧುರೀಣರಲ್ಲಿ ಅವರಿಗಿರುವ ವಿಶ್ವಾಸವಾಗಿದೆಯೆಂದು ಹೇಳಿದ್ದಾರೆ. ಖಾನ್ ಅಬ್ದುಲ್ ಗಫಾರ್ ಖಾನರಂತಹ ಧುರೀಣರು ಭಾರತದಲ್ಲಿ ಅನೇಕ ಮಂದಿಯಿಲ್ಲವೆಂಬುದನ್ನು ಎಲ್ಲರೂ ಒಪ್ಪಬೇಕಾಗಿದೆ. ಗಾಂಧಿಜಿಯವರು ತಮ್ಮ 'ಹರಿಜನ' ಪತ್ರಿಕೆಯಲ್ಲಿ ಬರೆಯುತ್ತಿರುವ ಲೇಖನಗಳು ಅವರ ಮನಸ್ಸಿನ ಪರಿಸ್ಥಿತಿಯು ಹೇಗಿದೆಯೆಂಬುದನ್ನು ಸ್ಪಷ್ಟವಾಗಿ ತಿಳಿಸುತ್ತಿವೆ. ಕಾಂಗ್ರೆಸ್ ಸಂಸ್ಥೆಯ ಅವ್ಯವಸ್ಥೆ, ಅದರ ಹಲವಾರು ಧುರೀಣರ ಹೇಯವಿಧಾನಗಳೇ ಮೊದಲಾದವುಗಳ ಕುರಿತು ಬರೆಯುವಾಗ ಜಗತ್ತಿನ ಮಹಾವ್ಯಕ್ತಿಗಳಲ್ಲೊಬ್ಬರಾದ ಗಾಂಧಿಜಿ

ಯವರ ಸಹನೆಯು ಮೇರೆ ಮೀರಿದಂತೆ ಕಾಣುತ್ತದೆ.

೦೦

ಗಾಂಧಿಜಿಯವರ ಧೋರಣೆಯು ಇಂದಿನ ಭಾರತಕ್ಕೆ ಬೇಕಾಗಿದೆಯೇ ಎಂದು ಪ್ರಶ್ನಿಸುವುದಿದ್ದರೆ ಹೌದೆಂದು ನಿರ್ಭಯವಾಗಿ ಹೇಳಬಹುದು. ಭಾರತದ ಇಂದಿನ ಪರಿಸ್ಥಿತಿಯಲ್ಲಿ ಗಾಂಧಿಜಿಯವರ ಧೋರಣೆಯಲ್ಲದೆ ಮತ್ತಾವುದೂ ಸರಿ ಬೀಳುವಂತಿಲ್ಲ. ಮೊನ್ನೆ ನಡೆದ ಮ್ಯೂನಿಕ್ ಒಪ್ಪಂದವು ಶಾಂತಿಯನ್ನು ಸಂಸ್ಥಾಪಿಸುವ ಬದಲು ಯುದ್ಧದ ವಿಷಗಾಳಿಯನ್ನು ಹಬ್ಬಿಸಿದೆ. ಗಾಂಧಿಜಿಯವರನ್ನು ಐಕ್ಯ ಸಂಭಾಷಣೆಗಾಗಿ ತನ್ನ ಮುಂಬಯಿ ನಿವಾಸಕ್ಕೆ ಕರೆಸಿದ ಮುಸ್ಲಿಮ್ ಲೀಗಿನ ಅಧ್ಯಕ್ಷ ಜಿನ್ನರು ಕಾಂಗ್ರೆಸಿನೊಡನೆ ಬೇಕೆಂದೇ ಜಗಳ ಮಾಡುತ್ತಿದ್ದಾರೆ. 'ಇಂಡಿಯದ ಒಂಭತ್ತು ಕೋಟಿ ಮುಸಲ್ಮಾನರು ಇಂಡಿಯವನ್ನು ಜಯಿಸಲೇ ಬೇಕು' ಎಂಬುದು ಜಿನ್ನರ ಇತ್ತೀಚೆಗಿನ ಹಾಡಾಗಿ ಪರಿಣಮಿಸಿದೆ. ಲೀಗಿನವರು ಮುಸಲ್ಮಾನರನ್ನು ಹುರಿದುಂಬಿಸಲಿಕ್ಕಾಗಿ ಎಂತಹ ಸುಳ್ಳನ್ನಾಡಲೂ ಹಿಂಜರಿಯುವುದಿಲ್ಲ.

೦೦

ಭಾರತದಲ್ಲಿರುವ ಯುರೋಪಿಯನರು ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ನೋಡುತ್ತಿದ್ದಾರೆ. ಸಾಧ್ಯವಾದಷ್ಟು ಕಾಲ ಭಾರತದ ಸಂಪತ್ತನ್ನು ಉಪಭೋಗಿಸಿ ಸುಖಿಸಬೇಕೆಂಬುದು ಅವರ ಮಹತ್ವದ ಆಶೆಯಾಗಿದೆ. ಬಂಗಾಳ ಪ್ರಾಂತ್ಯವು ಅವರ ಪಾದಗಳಡಿಯಲ್ಲಿ ಹೊರಳಾಡುತ್ತಿದೆ. ಅಸ್ಸಾಮ್ ಪ್ರಾಂತ್ಯವು ಅಂತಿಮಾವಸ್ಥೆಯಲ್ಲಿರುವ ಮಾನವನಂತೆ ಉಸಿರಾಡುತ್ತಿದೆ. ಯುರೋಪಿಯನರು ಅಲ್ಲಿಗೂ ತಮ್ಮ ಕೈ ನೀಡುವುದರಲ್ಲಿದ್ದಾರೆ ಯುರೋಪಿಯನರು ಕಾಂಗ್ರೆಸ್ ಆಡಳಿತವನ್ನು ನಿಶ್ಚಯವಾಗಿಯೂ ಮೆಚ್ಚುತ್ತಾರೆ. ತೊಂದರೆಯಿಲ್ಲದೆ ಪ್ರಾಂತಿಕ ಕಾಂಗ್ರೆಸ್ ಸರಕಾರಗಳು ತೆರಿಗೆಯನ್ನು



ಬಾಬು ರಾಜೇಂದ್ರ ಪ್ರಸಾದರು.

ಸಂಗ್ರಹಿಸುತ್ತಿವೆ. ಒಳಿತು ಕೆಡುಕುಗಳ ಹೊಣೆಗಾರಿಕೆಯನ್ನು ಕಾಂಗ್ರೆಸಿನವರೇ ಹೊರಬೇಕಾಗಿದೆಯೆಂದು ಅವರಿಗೆ ಮೊದಲೇ ತಿಳಿದಿರುವ ವಿಚಾರ. ಎಷ್ಟರ ತನಕ ಭಾರತದಿಂದ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಬೊಕ್ಕಸಕ್ಕೆ ಹಣವು ನಿರಾತಂಕವಾಗಿ ಹೋಗುತ್ತಿರುವುದೋ ಅಷ್ಟರ ತನಕ ಯುರೋಪಿಯನರಿಗೆ ಯಾವ ಬೇಸರವೂ ಇಲ್ಲ. ಅವರ ಶಕ್ತಿಯು ಒಂದಿನಿತೂ ಕಡಿಮೆಯಾಗುವಂತಿಲ್ಲ. ಕಾಂಗ್ರೆಸಿನ ಈಗಿನ ಪಾರ್ಲಿಮೆಂಟರಿ ಮನೋವೃತ್ತಿಯು ಬ್ರಿಟಿಷ್ ವರ್ತಕರ ಮನ ಮೆಚ್ಚಿಸಿದೆ.

೦೦

ಭಾರತದ ರಾಜಕೀಯ ಜೀವನಕ್ಕೆ ಬೇಕಾದ ಶಕ್ತಿ ಬೆಳಕುಗಳನ್ನು ಗಾಂಧಿಜಿಯವರು ಕೊಡುತ್ತಿದ್ದಾರೆ. ದೂರದಿಂದ ನೋಡುವವರಿಗೆ ಗಾಂಧಿಜಿಯವರು ನಾಲ್ಕಾಣೆ ಕಾಂಗ್ರೆಸ್ ಮೆಂಬರರು ಕೂಡಾ ಅಲ್ಲ. ಕಾಂಗ್ರೆಸಿನ ಕುಂದು ಕೊರತೆಗಳನ್ನು ಅವರಷ್ಟು ಕಟುವಾಗಿ ಟೀಕಿಸುವವರು ಬೇರೊಬ್ಬರಿಲ್ಲ. ಆದರೆ ಇತ್ತೀಚೆಗೆ ರಾಜಾಜಿಯವರೆಂದಿರುವಂತೆ ಗಾಂಧಿಯವರು ಹದಿನಾರಾಣೆ ಕಾಂಗ್ರೆಸ್ ಮೆಂಬರರಾಗಿದ್ದಾರೆ ಅವರ ಶಕ್ತಿಯೇ ಇಂದು ಭಾರತವನ್ನು ಆಧರಿಸುತ್ತಿದೆ. ವೀರ ಪಠಾನರ ಪರಿಸ್ಥಿತಿಯನ್ನು ಅವಲೋಕಿಸುವುದಕ್ಕಾಗಿ ಗಡಿನಾಡಿನ ಗಾಂಧಿಯವರು ತಮ್ಮ ನಾಡಿಗೆ ಅವರನ್ನು ಕರೆದೊಯ್ಯುತ್ತಾರೆ. ಡಾ. ಖರೆಯವರು ಕಾಂಗ್ರೆಸನ್ನು ಟೀಕಿಸುವಾಗ ಅವರು ಗಾಂಧಿಯವರ ಮಾತನ್ನು ಉದಾಹರಿಸುತ್ತಾರೆ.

೦೦

ಭಾರತದ ಈ ಅದ್ವಿತೀಯ ಶಕ್ತಿಯು ಶಾಶ್ವತ ವಿಶ್ರಾಂತಿಯನ್ನು ಪಡೆದ ಬಳಿಕ ಭಾರತದ ಪರಿಸ್ಥಿತಿಯು ಏನಾಗಬಹುದು?

ವೀರ ಜವಾಹರರು ಎದ್ದು ನಿಂತು ರಾಜಕಾರಣದ ರಥವನ್ನು ನಡೆಸುವ ಚಿತ್ರವು ಕೂಡಲೆ ನಮ್ಮ ಭಾವನಾ ದೃಷ್ಟಿಯ ಮುಂದೆ ಬಂದು ನಿಲ್ಲುತ್ತದೆ. ರಥವು ತನ್ನ ಪಥದಿಂದ ಸರಿಯಲಾರದೆಂದು ಪ್ರತಿಯೊಬ್ಬ ಭಾರತೀಯನೂ ಭರವಸೆ ಪಡಬಹುದಾಗಿದೆ. ಕಾರಣ-ಸಾರಥ್ಯವನ್ನು

ವಹಿಸಿ ತುಂಬಾ ಅನುಭವವುಳ್ಳವರೇ ಅದನ್ನು ನಡೆಸಲಿದ್ದಾರೆ.

ಆದರೆ ವಿಶಾಲಭಾರತದ ವಿವಿಧ ಪ್ರವಾಹಗಳ ವಿಚಾರವೇನು? ಅಧ್ಯಕ್ಷ ಸುಭಾಷರು ಇಂದಿನ ಪರಿಸ್ಥಿತಿಯನ್ನು ಕಂಡು ಅದಕ್ಕನುಸಾರವಾಗಿ ನಡೆಯುತ್ತಿದ್ದಾರೆ. ಕೆಲವೊಮ್ಮೆ ಕಾಂಗ್ರೆಸ್ ತತ್ವಗಳ ಎದೆಮೆಟ್ಟಿ ನಡೆಯುವ ಕಾಂಗ್ರೆಸ್ ಮಂತ್ರಿಮಂಡಲಗಳು ನಮ್ಮೆದುರಿನಲ್ಲಿವೆ.

೦೦

ಪಂಡಿತ ನೆಹರುಗಳು ರಾಜನೀತಿಯ ಕುದುರೆಗಳನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳುವರೆನ್ನೋಣ. ಆದರೆ ಇತರರ ಕುರಿತೇನು? ರಾಜೇಂದ್ರ ಬಾಬು, ಸರ್ದಾರ್ ಪಟೇಲ್, ರಾಜಗೋಪಾಲಾಚಾರ್ಯರೇ ಮೊದಲಾದವರು ತಮ್ಮ ಎಂದಿನ ಪಥದಲ್ಲಿ ಮುನ್ನಡೆಯುವರೆ? ಬಿಹಾರಿ ಬಂಗಾಳಿ ಪ್ರಶ್ನೆಯಲ್ಲಿ ಬಂಗಾಳವು ಪ್ರಸಾದರನ್ನು ನಂಬುವುದಿಲ್ಲ. ನರಿಮನ್—ಖರೆ ಪ್ರಕರಣಗಳು ಸರ್ದಾರ್ ಪಟೇಲರು ಮುನ್ನಡೆವ ಪಥದಲ್ಲಿರುವ ಕಲ್ಲುಮುಳ್ಳುಗಳಂತಿವೆ. ಕ್ರಿಮಿನಲ್ ಲಾ ಎಮೆಂಡ್‌ಮೆಂಟ್ ಆಕ್ಟಿನ ಕ್ರೂರ ಸಂಜ್ಞೆಗಳು ರಾಜಾಜಿಯವರ ರಥದ ಕುದುರೆಗಳ ಮೇಲೆ ಹಾರಿ ಬೀಳುತ್ತಿವೆ. ಸತ್ಯ ಮತ್ತು ಅಹಿಂಸೆಯ ಸೂರ್ಯನ ಕಿರಣಗಳು ಎಂದಿನಂತೆಯೇ ಬೆಳಗಬಹುದೆ?

೦೦

ಗಾಂಧಿಯವರ ತತ್ವಗಳು ಚಿರಸ್ಥಾಯಿಯಾಗಿ ನಿಲ್ಲುವವೆ? ಅಥವಾ ಹಲವಾರು ವಿಧಾನಗಳು ಕಾಂಗ್ರೆಸ್ ರಂಗವನ್ನು ಪ್ರವೇಶಿಸಿ ಪರಸ್ಪರ ಹೊಡೆದಾಡಿಕೊಳ್ಳುವುವೆ? ಇಂದಿನ ಕಾಂಗ್ರೆಸ್ ಮಹಾಕೂಟವು ಮುಂದೆಯೂ ಸರಿಯಾಗಿ ಕೆಲಸ ಮಾಡಬಹುದೆ? ಶಿವಾಜಿಯ ಬಳಿಕ ತಲೆದೋರಿದ ಪರಿಸ್ಥಿತಿಯೇ ಪುನರಾವರ್ತಿಸಲ್ಪಡಬಹುದೆ? ಪ್ರಾಚೀನ ಕಾಲದಿಂದ ಪ್ರಾಮುಖ್ಯತೆಯ ಛತ್ರಚಾಮರಗಳನ್ನು ಉಪಭೋಗಿಸಿಕೊಂಡು ಬಂದಿರುವ ಸತ್ಯ ಮತ್ತು ಅಹಿಂಸೆಯು ಹೊಸ ರೂಪವನ್ನು ತಾಳಿ ಜಗತ್ತಿಗೆ ಆದರ್ಶಪ್ರಾಯವಾಗಬಹುದೆ?

೦೦

'ನಾನು ಮುಸಲ್ಮಾನರ ಎಲ್ಲಾ ಕೇಳಿಕೆಗಳನ್ನು ಪೂರೈಸಿಕೊಡುತ್ತೇನೆ. ಆದರೆ—ಮೊದಲು ಅವರು ಭಾರತವನ್ನು ಪ್ರೀತಿಸಲಿ, ಮೊದಲು ಭಾರತೀಯರು, ನಂತರ ಮುಸಲ್ಮಾನರೆಂದು ಅವರು ಭಾವಿಸಲಿ!' ಲೀಗ್-ಕಾಂಗ್ರೆಸ್‌ಗಳೊಳಗೆ ನಡೆದ ಕಟುವಾದ ಚರ್ಚೆಯ ಬಳಿಕ ಗಾಂಧಿಜಿಯವರಾಡಿದ ಮಾತುಗಳಿವು. ಕೊಳಕು ಭಾಷೆಯನ್ನಾಡಿ, ಭಾರತದ ಭಾವೀ ಜನಾಂಗದ ಸುಖಶಾಂತಿಯನ್ನು ಲೆಕ್ಕಿಸದೆ, ಐಕ್ಯದ ಕ್ಷೀಣ ಪ್ರವಾಹಕ್ಕೆ ತಡೆಯನ್ನುಂಟು ಮಾಡಿರುವ ಜಿನ್ನರನ್ನು ಕಂಡು ಬೇಸರದಿಂದ-'ಹಿಂದೆ ನಾನು ನೋಡಿದ ಜಿನ್ನರ ವಿಶಿಷ್ಟಗುಣಗಳಿಲ್ಲ!' ಎಂದು ಗಾಂಧಿಜಿಯವರಂದಿದ್ದಾರೆ. ಆದರೆ ಈ ತರದ ಮನೋವೃತ್ತಿಯಿದ್ದುದರಿಂದಲೇ ಗಾಂಧಿಜಿಯವರು ಮಹಾತ್ಮಾರೆಂದು ಹೇಳಿಸಿಕೊಂಡರು. ಗಾಂಧಿಜಿಯವರ ಬಳಿಕ ಇಂತಹ ಮನೋವೃತ್ತಿಯು ಉಳಿಯುವುದೆ? ಸೋಲು, ಸಂಕಟಗಳನ್ನು ಲೆಕ್ಕಿಸದೆ ಧ್ಯೇಯ ಸಾಧನೆಗಾಗಿ ಮುನ್ನಡೆವ ಧೋರಣೆಯು ಭಾವೀ ಭಾರತಕ್ಕೆ ರುಚಿಸಬಹುದೆ?

೦೦

ಇಂದು ತಲೆಯೆತ್ತಿ ನಿಂತಿರುವ ಹರಿಜನ ಸಮಸ್ಯೆಯು ಈಗಿನಂತೆ ಮುಂದೆ ಕೂಡಾ ಇರಬಹುದೆ? ಚರಕವನ್ನು ಎಡೆಬಿಡದೆ ತಿರುಗಿಸುತ್ತಿರುವ ಕೈಯ್ಯೇ ಹರಿಜನರನ್ನು ಅಧಃಪತನ ಕೂಪದಿಂದ ಎತ್ತಿ ಹಿಂದೂ ಧರ್ಮದ ಇತರ ಬಾಂಧವರ ಮಟ್ಟಕ್ಕೆ ತಂದಿರಿಸಿದೆ. ಆ ಕೈ ಮಾಯವಾದರೆ ಸನಾತನೀ- ಪಿಶಾಚಿಯು ತನ್ನ ಭೀಕರ ರೂಪವನ್ನು ತೋರಿಸಿ, ತೆರೆದ ದೇವಸ್ಥಾನಗಳ ಬಾಗಿಲುಗಳನ್ನು ಮುಚ್ಚಿ, ಬವಿಗಳ ಬಳಿ ಸಾರದಂತೆ ಮಾಡಿ ಅಸ್ಪೃಶ್ಯತೆಯ ಸಾಂಕ್ರಾಮಿಕ ರೋಗವನ್ನು ಪುನಃ ಹಬ್ಬಿಸಬಹುದೆ?

೦೦

ಆದರೆ ಭಾವೀ ಸಾರಥ್ಯವನ್ನು ವಹಿಸಲಿರುವ ನೆಹರುಗಳು ಸಾಮಾನ್ಯರಲ್ಲ. ಗಾಂಧಿಜೀಯವರು ಕೂಡಾ ನೆಹರುಗಳ ಕುರಿತು ಹೀಗಂದಿದ್ದಾರೆ. "ನಮ್ಮಲ್ಲಿ ಅಭಿಪ್ರಾಯ ವ್ಯತ್ಯಾಸವುಂಟಾದೊಡನೆ ನಾನು ಹಿಂತೆಗೆಯುತ್ತೇನೆ ಕಾರಣ-ಜವಾಹರ್‌ಲಾಲರು ಸ್ವಾರ್ಥಕ್ಕಾಗಿ ಹೋರಾಡಲಾರರೆಂದು ನನಗರಿತಿದೆ" ಈ ಮನೋಭಾವವು ನೆಹರು-ಗಾಂಧಿಯರಲ್ಲಿ ಅನ್ಯೋನ್ಯತೆಯನ್ನು ಬೆಳೆಸಿದೆ. ಈ ಭಾವವೇ ನೆಹರುಗಳ ಧೋರಣೆಗಳ ಬುನಾದಿಯಾಗಬಹುದೆ? ಅಥವಾ ವೀರ ನೆಹರುಗಳು ತಮ್ಮ ಅಪ್ರತಿಮ ಶಕ್ತಿ ಸಾಮರ್ಥ್ಯದ ಜ್ವಾಲೆಯನ್ನು ಹೊರಗೆಡವಿ, ಕ್ರಾಂತಿಯ ಕರಾಳರಂಗದಲ್ಲಿ ಕಾಲಿ

ಡಬಹುದೆ? ಆ ಅವಸರ, ಆ ನಿಶ್ಚಿತ ಧೋರಣೆ, ಆ ಹಟವಾರಿತನವು ದೂರದ ಧ್ಯೇಯವನ್ನು ಒಮ್ಮೆ ಮರೆಯುವಂತೆ ಮಾಡಿ, ಕಾಲಡಿಯ ಮುಳ್ಳುಗಳನ್ನು ನುಚ್ಚುನೂರುಗೊಳಿಸುವ ಇಚ್ಛೆಯನ್ನು ನೆಹರುಗಳಲ್ಲಿ ಉಂಟುಮಾಡಬಹುದೆ?

೦೦

ಗಾಂಧಿಯವರ ನಂತರ ಭಾರತದ ರೂಪವು ಹೇಗಿರಬಹುದು? ರಾಜಕಾರಣಿಗಳು ಈ ಕಡೆಗೆ ತಮ್ಮ ಲಕ್ಷ್ಯವನ್ನು ಕೊಡುವುದು ಅಸ್ವಾಭಾವಿಕವಾದುದಲ್ಲ. ಈ ವಿಚಾರವನ್ನು ಇತರರಿಗೆ ಮನದಟ್ಟುಗೊಳಿಸುವುದಕ್ಕಾಗಿಯೇ ಗಾಂಧಿಜಿಯವರು ಕಾಂಗ್ರೆಸಿನಿಂದ ಹೊರಗೆ ಹೋದರು ಆಗಾಗ "ಹರಿಜನ"ದ ಪುಟಗಳಲ್ಲಿ ತನ್ನಲ್ಲುಂಟಾಗಿರುವ ಮನೋವ್ಯತ್ಯಾಸವನ್ನು ಬರೆದರು. ತನ್ನ ಹರೆಯದ ಅಶಕ್ತಿಯ ಕುರಿತು ಸೂಚಿಸಿದರು. ಮಾನವ ಜೀವಿಯಾಗಿರುವುದರಿಂದ ಗಾಂಧಿಯವರು ಚಿರಂಜೀವಿಯಾಗಲಾರರು. ಇತ್ತೀಚೆಗೆ ಗಾಂಧಿಜಿಯವರು ಸತ್ಯ ಮತ್ತು ಅಹಿಂಸೆಯನ್ನು ಕಾಂಗ್ರೆಸ್ ಸಂಸ್ಥೆಯ ತುತ್ತತುದಿಯಲ್ಲಿರಿಸಿ- ಯಾರಿಗೆ ಇದರಲ್ಲಿ ವಿಶ್ವಾಸವಿಲ್ಲವೋ ಚಿಂತಹರು ಇದರಿಂದ ದೂರವಾಗುವುದು ಲೇಸು- ಎಂದು ಕೂಡಾ ಹೇಳಿದ್ದಾರೆ. ಹಿಟ್ಲರ್ ಮುಸ್ಸೋಲಿನಿಯರ ಸುವ್ಯವಸ್ಥಿತ ಫ್ಯಾಸಿಸ್ಟ್ ತತ್ವಗಳಿಗೆ ಅವರ ರಾಷ್ಟ್ರದ ಜನರು ತಲೆ ಬಾಗಿಸಿದಂತೆ, ಗಾಂಧಿಜಿಯವರಿಗೆ ಕೂಡಾ ಭಾರತೀಯರು ಸತ್ಯ ಮತ್ತು ಅಹಿಂಸೆಗಳಿಗೆ ಶಿರ ಮಣಿಯುವಂತೆ ಮಾಡಲು ಸಾಧ್ಯವಾಗದಿರುವುದು ಶೋಚನೀಯವಾಗಿದೆ.

೦೦

ಖರೆಪ್ರಕರಣದಲ್ಲಿ ಗಾಂಧಿಜಿಯವರಾಡಿದ ಮಾತುಗಳು ಚಿರಸ್ಮರಣೀಯವಾಗಿವೆ. "ಫ್ಯಾಸಿಸ್ಟ್ ಆಡಳಿತವಾಗಿದ್ದರೆ ಒಂದೇ ಪೆಟ್ಟಿಗೆ ಡಾ| ಖರೆಯವರ ರುಂಡವು ಅವರ ದೇಹದಿಂದ ಪ್ರತ್ಯೇಕಿಸಲ್ಪಡುತ್ತಿತ್ತು. ಇದನ್ನು ನೋಡುವಾಗ ಪೂರ್ಣ ವ್ಯವಸ್ಥೆಯನ್ನು ಜಾರಿಗೆ ತರಬೇಕಾದರೆ ಹಿಂಸಾತ್ಮಕ ವಿಧಾನದಿಂದಲೇ ಸಾಧ್ಯವೆಂದು ಅರ್ಥವಾಗುವುದಿಲ್ಲವೆ? ಪ್ರಾಯಶಃ ಗಾಂಧಿಜಿಯರೂ ಹಾಗೆಯೇ ಅರ್ಥ ಮಾಡಿಕೊಂಡಿರಬೇಕು.

೦೦

ಜರ್ಮನಿಗೆ ಹಿಟ್ಲರ್, ಇಟಲಿಗೆ ಮುಸ್ಸೋಲಿನಿಗಳಿದ್ದಂತೆ ಭಾರತಕ್ಕೆ ಗಾಂಧಿಜಿಯವರೆಂದು ಹೇಳಿದರೂ ಅದರಲ್ಲಿ ತುಂಬಾ ವ್ಯತ್ಯಾಸವಿದೆ. ಇಟಲಿ ಜರ್ಮನಿಗಳಲ್ಲಿ ಸರ್ವಾಧಿಕಾರವನ್ನು ಜನರು ಬೆದರಿ ಪೂಜಿಸುತ್ತಾರೆ. ಭಾರತದಲ್ಲಿ ಜನರು ಗಾಂಧಿಯವರನ್ನು ಪ್ರೇಮಾದರಗಳಿಂದ ಕಾಣುತ್ತಾರೆ. ಆದರೆ ಭಯವೇ ಇಂದು ಜಗತ್ತಿನಲ್ಲಿ ಅಧಿಕಾರ ನಡೆಸುತ್ತಿದೆ. ಭಾರತವು ಪಾಶ್ಚಾತ್ಯರನ್ನು ಅನುಕರಿಸಿ ಭಾರತದ ಅಹಿಂಸಾತ್ಮಕ ವಾತಾವರಣವನ್ನು ಹಿಂಸೆಯ ಕಾರ್ಮೋಡಗಳಿಂದ ತುಂಬಿಸಬಹುದೆ? ಹಿಂಸೆಯನ್ನು ಅಂಗೀಕರಿಸಿದರೆ ಭಾರತದ ದಾಸ್ಯವು ಮತ್ತಷ್ಟು ಹೆಚ್ಚುವುದೆಂಬುದರಲ್ಲಿ ನಿರ್ವಿವಾದ.

ಭಾರತದ ಭವಿತವ್ಯತೆಯು ಕಾಲಗರ್ಭದಲ್ಲಿದೆ. ಗಾಂಧಿಜಿಯವರ ಜೀವನಾನಂತರ ಭಾರತವು ಅವ್ಯವಸ್ಥೆಯ ತವರುಮನೆಯಾಗುವುದೋ, ಅಥವಾ ಕ್ರಾಂತಿಯ ನೆಲೆವೀಡೆನಿಸುವುದೊ?

---

(೨೧ನೆ ಪುಟದಿಂದ)

ಲಾಯಿಸಲಿದ್ದಾರೆಂದು ಕೇಳಿ ಬರುತ್ತದೆ. ನನ್ನ ಅಭಿಪ್ರಾಯವನ್ನು ನೀವು ಕೇಳುವುದಾದರೆ ಆದಷ್ಟು ಬೇಗನೆ ರಾಜಧಾನಿಯನ್ನು ಹಿಮಾಲಯದ ಮಾನಸ ಸರೋವರದ ಸಮೀಪಕ್ಕೆ ಕೊಂಡೊಯ್ಯುವುದುತ್ತಮ. ನಿಮ್ಮ ಅದೃಷ್ಟವಶಾತ್ ಹಿಮಜನರು ಸಿಕ್ಕಿದರೆ 'ಸಂಜೀವಿನಿ'ಯ ರಹಸ್ಯವನ್ನು ನೀವು ಅವರಿಂದ ತಿಳಿದುಕೊಳ್ಳಬಹುದು.

ಇತಿ ತಮ್ಮ
ವಿಹಂಗಮ ದೃಶ್ಯಪ್ರಿಯ
**ಭಗದತ್ತ**

---

**ಮಿ| ಜಿನ್ನರವರಿಗೆ,**
ಮುಂಬಯಿ.

ಮಹನೀಯರೆ,

ಒಂದೇ ಒಂದು ವಿಚಾರಕ್ಕಾಗಿ ಈ ಪತ್ರವನ್ನು ನಾನು ಬರೆಯುತ್ತಿದ್ದೇನೆ. ಜೆಕೊಸ್ಲೊವೇಕಿಯದಲ್ಲಿ ಸುಡೇಟನರಿದ್ದಂತೆ ಭಾರತದಲ್ಲಿ ಮುಸ್ಲಿಮ್ ಲೀಗಿನವರು-ಎಂದು ತಾವು ಹೇಳಿರುವುದನ್ನು ನೆನಸಿದಾಗ ನನಗೊಂದು ಯೋಚನೆ ಹೊಳೆಯಿತು. ಸುಡೇಟನ್ ಜರ್ಮನರ ದಳಪತಿ ಹೆರ್ ಹೆನ್ಲಿನ್ ಆಗಿರುವುದರಿಂದ, ಭಾರತದ ಸುಡೇಟನ್ ಮುಸ್ಲಿಮರ ದಳಪತಿಯಾದ ತಮಗೆ "ಹೆರ್ ಜಿನ್ಲಿನ್" ಎಂಬ ಹೆಸರು ಒಪ್ಪುತ್ತದೆ. ದಯವಿಟ್ಟು ಸ್ವೀಕರಿಸುವಿರೆಂದು ನಂಬುವ

**ನಾಝಿಯೊ ಭಗದತ್ತ.**







# ನಿಮಗೆ ಬೇಸರವಾದಾಗ ನನಗೆ ಬರೆಯಿರಿ.

ಪ್ರಶ್ನೆಗಳನ್ನು ಕೇಳುವವರು ತಮ್ಮ ಸಂಪೂರ್ಣ ವಿಳಾಸವನ್ನು ಕೊಡಬೇಕು. ಪೂರ್ಣ ವಿಳಾಸಗಳನ್ನು ಕೊಡದವರ ಪ್ರಶ್ನೆಗಳು ಉತ್ತರಿಸಲ್ಪಡಲಾರವು. ಪ್ರಶ್ನೆಗಳು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಡಬೇಕು. ಅಯೋಗ್ಯವೆಂದು ಕಂಡುಬಂದ ಪ್ರಶ್ನೆಗಳಿಗೆ ಉತ್ತರಕೊಡಲಾಗುವುದಿಲ್ಲ. ತಮ್ಮ ಪ್ರಶ್ನೆಗಳು ಹಿಂದೆಕಳುಹಿಸಲ್ಪಡಬೇಕೆಂದು ಬಯಸುವವರು ಅದಕ್ಕಾಗುವ ಅಂಚೆಚೀಟನ್ನು ಕಳುಹಿಸಿಕೊಡಬೇಕು.

**ಶ್ರೀ. ಟಿ. ಕರುಣಾಕರ, ಮುಂಬಯಿ.**

"ತಮ್ಮ ತಾ. 9 10 '38ರ ಸಂಚಿಕೆಯಲ್ಲಿ 'ಗೆಳೆಯ' ಎಂಬ ಗುಪ್ತನಾಮದವರೊಬ್ಬರು ಬಸ್ಸು ಪ್ರಯಾಣವೆಂಬ ವಿಷಯವಾಗಿ ಅಂತರಂಗದ ವಾಚಕರಿಗೆ ಕೆಲವು ಉಪನ್ಯಾಸವನ್ನು ಲೇಖಿಸಿರುವರು. ಆದರೆ ಅವರು ಹಾಗೆಲ್ಲಾ ಉಪನ್ಯಾಸವನ್ನು ಕೊಟ್ಟು ಬಸ್ಸು ಕಂಪೆನಿಯವರನ್ನು ದಿವಾಳಿ ತೆಗಿಸುವರೋ ಎಂದು ನನಗೆ ಭಯವಾಗುತ್ತದೆ.

ಆದ್ದರಿಂದ ಆ ಗೆಳೆಯ ಮಹಾಶಯರು ಬೇಡವಾದ ವಿಷಯವನ್ನು ಬರೆಯುವುದರಿಂದ ಅವರಿಗೇನು ಪ್ರಯೋಜನ? ಅಲ್ಲದೆ ಹಾಗೆಲ್ಲ ಬರೆದು ಪ್ರಯಾಣಿಕರನ್ನು ಮರುಳುಗೊಳಿಸುವುದು ನ್ಯಾಯವೆ?''

ಬಸ್ಸು ಕಂಪೆನಿಯವರಿಂದಾಗಿ ನಮ್ಮ-ನಿಮ್ಮಂತಹರು ದಿವಾಳಿಯಾಗಬಾರದೆಂದು ಗೆಳೆಯರು ವಾಚಕರಿಗೆ 'ಉಪನ್ಯಾಸ' ಕೊಟ್ಟಿರಬಹುದು. ಅವಶ್ಯವಿದ್ದಾಗ ದೂರ ಊರುಗಳಿಗೆ ಮಾತ್ರ ಬಸ್ಸುಗಳಲ್ಲಿ ಪ್ರಯಾಣ ಮಾಡುವುದೊಳ್ಳೆಯದೆಂದು ಅವರು ಹೇಳಿದ್ದಲ್ಲದೆ, ಸರ್ವಥಾ ಬಸ್ಸಿನಲ್ಲಿ ಪ್ರಯಾಣ ಮಾಡಬಾರದೆಂದು ಅವರು ಹೇಳಲಿಲ್ಲ. ಇದನ್ನು ಹೇರಳ ಹಣವಿದ್ದವರು ಕೂಡಾ ಬೇಡವಾದುದೆಂದು ಹೇಳಲಿಕ್ಕಿಲ್ಲ. ಆದರೆ ನೀವು ಮಾತ್ರ 'ಬೇಡವಾದ ವಿಷಯವನ್ನು ಬರೆಯುವುದರಿಂದ ಅವರಿಗೇನು ಪ್ರಯೋಜನ' ಎಂದು ಕೇಳಿರುವುದನ್ನು ನೋಡುವಾಗ ನೀವು ಹೇಳಿದ್ದನ್ನು ಪೂರ್ಣವಾಗಿ ತಿಳಿದುಕೊಳ್ಳದೆ 'ಬೇಡವಾದ' ಪ್ರಶ್ನೆಯನ್ನು 'ಕೇಳುವುದರಿಂದ ನಿಮಗೇನು ಪ್ರಯೋಜನ? ಎಂದು ಪ್ರಶ್ನಿಸಬೇಕಾಗುತ್ತದೆ. 'ಅವರು ಹಾಗೆಲ್ಲ ಬರೆದು ಪ್ರಯಾಣಿಕರನ್ನು ಮರುಳುಗೊಳಿಸುವುದು' ನ್ಯಾಯವೇ ಎಂದು ಹೇಳಬಹುದು. ಕಾರಣ, ಅದರಿಂದ ಪ್ರಯಾಣಿಕರ ಜೇಬಿನಲ್ಲಿ ಒಂದೆರಡು ಕಾಸುಗಳು ಉಳಿಯಬಹುದು. ಆದರೆ ನೀವು ಹೀಗೆಲ್ಲಾ ಬರೆದು ನಮ್ಮನ್ನು ಮರುಳುಗೊಳಿಸಿ ನಮ್ಮ ಜೇಬಿನಲ್ಲಿ ಒಂದೆರಡು ಕಾಸುಗಳು ಉಳಿಯದಂತೆ ಯತ್ನಿಸುವುದು ಅನ್ಯಾಯವಲ್ಲದೆ, ನಾವು ಅದಕ್ಕೆ ಮರುಳಾಗದೆ ಖಂಡಿತವಾಗಿಯೂ ಒಂದೆರಡು ಪುಡಿಕಾಸುಗಳು ಜೇಬಿನಲ್ಲಿಯೇ ಎಡೆಬಿಡದೆ ವಾಸಮಾಡುವಂತೆ ಯತ್ನಿಸುತ್ತೇನೆ.

ಅದಂತಿರಲಿ, ತಾವು ಬಸ್ ಕಂಪೆನಿಯ ಅಧಿಕಾರಿ ಅಥವಾ ನೌಕರವರ್ಗಕ್ಕೆ ಸೇರಿದವರಲ್ಲವಷ್ಟೆ?

೦೦೦

**ಶ್ರೀ. ರಘುವೀರ ವೆಂಕಟರಮಣ ಪ್ರೋಕಳ್, ವಿದ್ಯಾರ್ಥಿ, ಕುಮಟಾ.**

'ನಿಮ್ಮ ಕಳೆದ ಸಂಚಿಕೆಯಲ್ಲಿದ್ದ 'ಮಗುವಿನ ತಂದೆ' ಎಂಬ ಕಥೆಯಲ್ಲಿ ರತ್ನಳ ಮಗುವಿನ ತಂದೆಯು ಡಾ| ಶ್ರೀಧರರಾಯನೋ ಯಾ ಬೆಸ್ತ ಸುಬ್ಬನೊ?'

ಇದಕ್ಕೆ ಸರಿಯಾದ ಉತ್ತರವನ್ನು ಕೊಡಬಲ್ಲ ಸಮರ್ಥ ವ್ಯಕ್ತಿಯೆಂದರೆ ಮಗುವಿನ ತಾಯಿ ರತ್ನ. ಆದರೆ ಆಕೆಯು ಕಾಲ್ಪನಿಕ ಜಗತ್ತಿನಲ್ಲಿ ವಾಸಿಸುತ್ತಿರುವುದರಿಂದ ಅವಳನ್ನು ಪ್ರಶ್ನಿಸುವುದು ಸುಲಭಸಾಧ್ಯವಾದ ಕೆಲಸವಲ್ಲ. ಆದರೆ ಇಷ್ಟು ಹೇಳಬಹುದು. ಡಾ| ಶ್ರೀಧರರಾಯನು ರತ್ನಳನ್ನು ವರಿಸಿದ ಗಂಡ. ಬೆಸ್ತನೊಬ್ಬನು ಆಕೆಯ ಸಹಾಯಕ ಗಂಡ. ಮಗುವನ್ನು ಇವರಿಬ್ಬರೂ ಸಂಪಾದಿಸಿದರೋ, ಅಥವಾ ಸುಬ್ಬನೊಬ್ಬನೇ ಸಂಪಾದಿಸಿದನೋ ಎಂದು ನನಗೆ ಹೇಳಲಾಗುವುದಿಲ್ಲ.

(೩೯ನೇ ಪುಟ ನೋಡಿರಿ)

# ಭಗದತ್ತನ ಬಹಿರಂಗ ಪತ್ರಗಳು.



**ಢಿಲ್ಲಿ ಕಾಂಗ್ರೆಸ್ ಮೀಟಿಂಗಿನಿಂದ ಹೊರನಡೆದ ತೀವ್ರಗಾಮಿಗಳಿಗೆ,**

ಪ್ರಿಯ ಕಾಮ್ರೇಡ್ಸ್!

ಎಂಥ ಅನಾಹುತವಿದು! ಮಹಾತ್ಮಾಜಿಯವರು ಇತ್ತೀಚೆಗಿನ ತನ್ನ ಹೇಳಿಕೆಯಲ್ಲಿ-

‘‘ಯಾರು ಹಾರ್ದಿಕವಾಗಿ ಸತ್ಯ ಮತ್ತು ಅಹಿಂಸೆ, ಖಾದಿ...ಮೊದಲಾದುವುಗಳಲ್ಲಿ ನಂಬುದಿರುತ್ತಾರೋ ಅವರು ಕಾಂಗ್ರೆಸಿನ ಸದಸ್ಯರಾಗಲು ಅರ್ಹರಲ್ಲ’’ವೆಂದು ಹೇಳಿಬಿಟ್ಟಿದ್ದಾರೆ. ಮೈ ಗುಡ್‌ನೆಸ್, ನಿಮ್ಮಲ್ಲಿ ಹೆಚ್ಚಿನವರು ಸತ್ಯ ಮತ್ತು ಅಹಿಂಸೆಯನ್ನು “Mere sham” ಎಂದು ಹೇಳುವವರು. ಖಾದಿಯಲ್ಲಿ ನಿಮಗೆ ವಿಶ್ವಾಸವೇ ಇಲ್ಲ. ಹೀಗಿರುವಾಗ ನೀವು ಒಂದೋ ಕಾಂಗ್ರೆಸಿನಿಂದ ಹೊರಗಿರಬೇಕು, ನಿಮ್ಮ ‘ವಾದ’ವನ್ನು ಬದಲಾಯಿಸಬೇಕೆಂದು ಇದರರ್ಥವಾಯಿತು. ತಡೆಯಲಶಕ್ಯವಾದ ಪರಿಸ್ಥಿತಿಯನ್ನೆದುರಿಸುವುದಕ್ಕಾಗಿ ಗಾಂಧಿಜಿಯವರು ಹೀಗಂದಿರುವರಂತೆ. ಈ ಕುರಿತು ನನ್ನಭಿಪ್ರಾಯವನ್ನು ಈಗಲೇ ಹೇಳದೆ ನಮ್ಮ ಪೈಕಿ ರೋಯಿಸ್ಟ್, ಕಾಂಗ್ರೆಸ್ ಸೋಶಿಯಲಿಸ್ಟ್, ಕಮ್ಯೂನಿಸ್ಟ್, ಅಥವಾ ಒಪ್ಪಚ್ಯೂನಿಸ್ಟ್ ಅಥವಾ ಯಾರಾದರೊಬ್ಬರ ಖಂಡ ತುಂಡ ಹೇಳಿಕೆಯನ್ನು ನಿರೀಕ್ಷಿಸುತ್ತಿರುವ-

ತೀವ್ರಗಾಮಿ **ಭಗದತ್ತ**

---

**ಕರ್ನಲ್ ಮ್ಯೂರ್ ಹೆಡ್ಡರಿಗೆ,**

ಧೊರೆಗಳೆ,

ಗುಡ್ ಮಾರ್ನಿಂಗ್. ಭಾರತದ ‘‘ಅಂಡರ್ ಸೆಕ್ರೆಟರಿ ಆಫ್ ಸ್ಟೇಟ್’’ ರಾದ ತಾವು ನಮ್ಮಲ್ಲಿಗೆ ಚಿತ್ತೈಸಿ, ‘‘ನಾನು ಭಾರತದ ವಿಹಂಗಮ ದೃಶ್ಯವನ್ನು ನೋಡುವುದಕ್ಕಾಗಿ ಬಂದಿದ್ದೇನೆ’’ ಎಂದು ಹೇಳಿರುವುದರಿಂದ ನಭೋಮಂಡಲದಲ್ಲಿ ಹಾರಾಡುವ ವಿಹಂಗ (ಪಕ್ಷಿ) ಗಳಲ್ಲಿ ಪ್ರಚಂಡ ಸ್ಪರ್ಧೆಯೊಂದು ತಲೆದೋರಿ, ತಾವು ಯಾವ ಪಕ್ಷಿಯಂತೆ ಹಾರಿ ನೋಡುವಿರೆಂಬ ಪ್ರಶ್ನೆಯು ಲಕ್ಷಗಟ್ಟಲೆ ಪಕ್ಷಿಗಳನ್ನು ಕಷ್ಟಕ್ಕೀಡು ಮಾಡಿದೆ. ಕಾಗೆಯೊಂದು ಬಹಳ ಧೈರ್ಯದಿಂದ ಅದನ್ನೇ ನೀವು ಅನುಕರಿಸಬಹುದೆಂದು ಭರವಸೆಯಿಂದ ಹೇಳುತ್ತಿದೆ.

ತಮಗೆ ಭಾರತದ ನಿಜವಾದ ಪರಿಚಯವಾಗಬೇಕಿದ್ದರೆ ತಾವು ‘‘ವಿಹಂಗಮ ದೃಶ್ಯ’’ವನ್ನು ಕಾಣುವುದಕ್ಕಿಂತ ಜಾಲಿಯನ್ ವಾಲಾಬಾಗಿನಲ್ಲಿ ಭಾರತೀಯರನ್ನು ಒಡ್ವಾಯರ್ ಸಾಹೇಬರು ಹೊಟ್ಟೆಯೆಳೆಸಿದಂತೆ, ತಾವು ಭಾರತದ ‘‘ಕ್ರಿಮಿ ದೃಶ್ಯ’’ವನ್ನು ಕಾಣುವುದಕ್ಕಾಗಿ ನಾಲ್ಕೂ ‘‘ಕಾಲು’’ಗಳಲ್ಲಿ ಸಂಚರಿಸುವುದು ಲೇಸೆಂದು ನನ್ನ ಸೂಚನೆ. ಆಗ ಭಾರತದ ನಿಜಪರಿಸ್ಥಿತಿಯು ತಮಗೆ ಸ್ಪಷ್ಟವಾಗಿ ತಿಳಿಯಬಹುದು.

ತಾವು ಹೆಚ್ಚು ಕಾಲ ಭಾರತದಲ್ಲಿ ಸಂಚರಿಸಲು ಸಾಧ್ಯವಿಲ್ಲದಿರುವುದರಿಂದ ‘ಷಿಕಾರಿ’ಯ ಸುಖವನ್ನನುಭವಿಸುವ ಭಾಗ್ಯವು ತಮಗೆ ಸಿಗದಿರಬಹುದೆಂದು ನನ್ನ ಭಾವನೆ. ಹೀಗಿದ್ದರೂ ತಾವು ಬಂಗಾಳದ ಸೆಕ್ರೆಟೇರಿಯೆಟಿನ ಬಳಿಗೆ ಬಂದೊಡನೆಯೇ ತಮಗೆ ಹುಲಿ, ಸಿಂಹಗಳ ಗರ್ಜನೆಯು ಕೇಳಿಸಬಹುದು. ಕಾರಣ ಅಲ್ಲಿಯ ಪ್ರಧಾನರು ಸ್ವಲ್ಪ ಸಮಯದ ಹಿಂದೆ ‘ನಾವು ಹುಲಿಗಳು—ಸಿಂಹಗಳು’ ಎಂದು ಹೇಳಿದ್ದಾರೆ.

ಆದಂತಿರಲಿ. ನಿಮ್ಮ ವೈಸರಾಯರು ಸದ್ಯದಲ್ಲಿಯೇ ರಾಜಧಾನಿಯನ್ನು ದೆಹಲಿಯಿಂದ ಬದ

೨೨ನೇ ಪುಟ ನೋಡಿರಿ.

# ಅಂತರಂಗ

ಆದಿತ್ಯವಾರ, ಒಕ್ಟೋಬರ ೩೦, ೧೯೩೮.

## ದ. ಕ. ಕಾಂಗ್ರೆಸ್ ಕಮಿಟಿಯಲ್ಲಿ ಕೋಲಾಹಲ.

ದಕ್ಷಿಣ ಕನ್ನಡ ಜಿಲ್ಲಾ ಕಾಂಗ್ರೆಸ್ ಕಮಿಟಿಯ ಕುರಿತು ಇತ್ತೀಚೆಗೆ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ಚರ್ಚೆಗಳು ಸ್ಥಳೀಯ ಕಾಂಗ್ರೆಸ್ ಸಂಸ್ಥೆಯ ದುರವಸ್ಥೆಯು ಯಾವ ಮಟ್ಟವನ್ನು ಮುಟ್ಟಿದೆಯೆಂಬುದನ್ನು ಸ್ಪಷ್ಟಗೊಳಿಸುತ್ತಿವೆ. ಜಿಲ್ಲಾ ಕಮಿಟಿಯ ಅಧ್ಯಕ್ಷರೇ ಮೊದಲಾದ ಮೂವರು ಅಧಿಕಾರಿಗಳ ಮೇಲೆ ಇನ್ನೊಮ್ಮೆ ಅವಿಶ್ವಾಸ ಠರಾವನ್ನು ತರುವರೆಂದು ವಾರ್ತೆ ಹಬ್ಬಿದೆ. ಜಿಲ್ಲಾ ಸಮಿತಿಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಕೆ. ಕೆ. ಶೆಟ್ಟರೇ ಆ ಸಂಸ್ಥೆಯೊಳಗೆ ನಡೆಯುತ್ತಿರುವ ಅನೇಕ ಒಳಸಂಚುಗಳನ್ನು ಬಯಲಿಗೆಳೆದಿರುವರು. ಕಾಂಗ್ರೆಸ್ ಸಮಿತಿಯ ಇಬ್ಬರು ಉಪಾಧ್ಯಕ್ಷರೂ ತಮ್ಮ ಸ್ಥಾನಗಳಿಗೆ ರಾಜಿನಾಮೆಯಿತ್ತಿದ್ದಾರೆ. ಜಿಲ್ಲಾ ಕಾಂಗ್ರೆಸ್ ಕಮಿಟಿಯ ಅಧಿಕಾರಿಗಳು ಸಮತಾವಾದಿ ಪಕ್ಷದ ಪ್ರಚಾರವನ್ನೇ ಕಾಂಗ್ರೆಸಿನ ಹೆಸರಲ್ಲಿ ನಡೆಸುತ್ತಿದ್ದಾರೆಂಬ ದೂರು ಬೇರೆ ಕೇಳಿಬರುತ್ತಿದೆ. ಈ ಚರ್ಚೆಗಳ ಸತ್ಯಾಸತ್ಯತೆಯು ಹೇಗಿದ್ದರೂ ಜಿಲ್ಲಾ ಕಾಂಗ್ರೆಸ್ ಸಮಿತಿಯಲ್ಲಿ ನಡೆಯುವ ಸೂತ್ರಚಾಲನೆಯಿಂದಾಗಿ ಮಿತಿಮೀರಿದ ಅವ್ಯವಸ್ಥೆಯುಂಟಾಗಿದೆಯೆಂಬುದರಲ್ಲಿ ಸಂದೇಹವಿಲ್ಲ. ಈಗಿನ ಸಮಿತಿಯು ಅಧಿಕಾರಕ್ಕೆ ಬಂದೊಡನೆಯೇ ಜಿಲ್ಲೆಯ ಹೆಚ್ಚಿನ ನುರಿತ ಕಾಂಗ್ರೆಸ್ ಕೆಲಸಗಾರರು ಕಾಂಗ್ರೆಸ್ ಕ್ಷೇತ್ರವನ್ನು ಬಿಟ್ಟು ದೂರ ಸರಿದಿದ್ದಾರೆ. ಈ ಕಮಿಟಿಯವರೊಡನೆ ಅಭಿಪ್ರಾಯ-ಭೇದವಿದ್ದರೂ ಅವರೊಡನೆ ಸಹಕರಿಸುತ್ತಿದ್ದವರನ್ನು ಒಂದಲ್ಲ ಒಂದು ನೆವದಿಂದ ಹೊರಗೆ ತಳ್ಳಲಾಗಿದೆ; ಮತ್ತು ತಳ್ಳುವ ಪ್ರಯತ್ನಗಳು ನಡೆಯುತ್ತಿವೆ. ಈ ಗೊಂದಲಗಳಿಂದಾಗಿ ಕಾಂಗ್ರೆಸ್ ಕಾರ್ಯಗಳು ನಡೆಯುವುದರ ಬದಲು ಜಿಲ್ಲೆಯಲ್ಲಿ ಅದರ ಹೆಸರು ಸಂಪೂರ್ಣ ಕೆಟ್ಟು ಹೋಗಿದೆ. ಈ ಲಜ್ಜಾವಹ ಘೋರಣೆಯ ಬಲದಿಂದಾಗಿ ತಮ್ಮ ಅಧಿಕಾರವನ್ನು ಕಾಯ್ದುಕೊಳ್ಳುವ ಈಗಿನ ಅಧಿಕಾರೀವರ್ಗದ ಮನೋವೃತ್ತಿಯಿಂದ ಯಾವ ಪುರುಷಾರ್ಥವು ಸಾಧಿಸಲ್ಪಡುವುದೋ ನಮಗರಿಯದು. ಹೇಗಿದ್ದರೂ ಈ ಅವ್ಯವಸ್ಥೆಯನ್ನು ಹೋಗಲಾಡಿಸುವುದು ಜಿಲ್ಲೆಯ ಮಹಾಜನರ ಆದ್ಯ ಕರ್ತವ್ಯವಾಗಿದೆ.

---

### ಸ್ವೀಕಾರ.

**ಮದಾಲಸೋಪಾಖ್ಯಾನ:** (ಪದ್ಯಕಾವ್ಯ) ನವ ನವ ಕಾಳಿದಾಸ ಕುಮಾರ ಮಾಧವ, ಪೌರಾಣಿಕ ಸಾಲಿಗ್ರಾಮ ಶ್ರೀ. ಕಂಠ ಶಾಸ್ತ್ರಿ, ಇವರಿಂದ ರಚಿಸಲ್ಪಟ್ಟಿದೆ. ಇದರ ಪ್ರಕಾಶಕರು ಮೈಸೂರಿನ ಶ್ರೀ. ಶಂಕರ ವಿಜಯ ಕಾರ್ಯಾಲಯದವರು.

**ಇಷ್ಟೋಪದೇಶ:** ವ್ಯಾಖ್ಯಾನಕಾರರು: ಮೈಸೂರಿನ ಆಸ್ಥಾನ ವಿದ್ವಾನ್ ನ್ಯಾಯತೀರ್ಥ ಶ್ರೀಮಾನ್ ಎ. ಶಾಂತಿರಾಜ ಶಾಸ್ತ್ರಿಯವರು. ಪಣಪಿಲ ಅರಮನೆಯ ಶ್ರೀಮತಿ ದೇಜಮ್ಮನವರು ಈ ಪುಸ್ತಕವನ್ನು ಪ್ರಕಟಿಸಿದ್ದಾರೆ.

---

(೨೭ನೆ ಪುಟದಿಂದ)

'ನಾನು ನನ್ನ ಮುಂದಿರುವ ಕರ್ತವ್ಯವನ್ನು ಕಡೆಗಣಿಸುವುದಿಲ್ಲವೆಂದೂ, ಇನ್ನು ಮುಂದೆ ನಾನು ಯೋಗ್ಯವಾಗಿ ನನ್ನ ಮೇಲೆ ಹೊರಿಸಲ್ಪಟ್ಟಿರುವ ಹೊಣೆಗಾರಿಕೆಯನ್ನು ಪೂರ್ತಿಗೊಳಿಸಲಾರೆನೆಂದೂ ತಿಳಿಸ ಬಯಸುತ್ತೇನೆ. ಆದುದರಿಂದ ಈ ದಿನ ಬೆಳಿಗ್ಗೆ ನಾನು ಈ ಕೆಳಗಿನ ಸಿಂಹಾಸನ ತ್ಯಾಗದ ಬರೆಹಕ್ಕೆ ಸಹಿ ಮಾಡಿದ್ದೇನೆ.

**ಮಿಕ್ಕುಳಿದ ಪ್ರಾಮುಖ್ಯ ಲೇಖಾಂಕಗಳನ್ನು ಮುಂದಿನ ಸಂಚಿಕೆಗಳಲ್ಲೋದಿರಿ**

## ಎಡ್ವರ್ಡ್-ಸಿಂಪ್ಸನರ ಪ್ರೇಮಕಥೆ.

ಮುಂದೇನು? ಬ್ರಿಟಿಷ್ ಸಾಮ್ರಾಜ್ಯದ ಚಕ್ರವರ್ತಿ ಎಡ್ವರ್ಡರ ಭವಿಷ್ಯವು ಹೇಗಾಗಬಹುದೆಂದು ಎಲ್ಲಾ ಖಂಡಗಳ ಜನರು ಆತುರದಿಂದ ಕಾಯುತ್ತಿರುವಾಗ ... ಬ್ರಿಟನಿಯ ಅಧಿಕಾರಿಗಳು ... ಕರ್ತರು ಆರ್ಚಬಿಷಪರು ತನ್ನ ಹೇಳಿಕೆಯಲ್ಲಿ ಎಲ್ಲರೂ ಸುಮ್ಮನಿರುವುದು ಲೇಸೆಂದು ಬಿನ್ನವಿಸಿದರು. ರಾಜರ ಸ್ನೇಹಿತಿಯು ಶಿಥಿಲವಾದುದೆಂ

ಮುತ್ಸದ್ದಿಗಳು ರಾಜರ ವಿವಾಹದ ಕುರಿತು ತಮ್ಮ ಸೂಚನೆಗಳನ್ನಿತ್ತರು. ಎಡ್ವರ್ಡರು ತಮಗಿಚ್ಛೆ ಯುದ್ಧವಳನ್ನು ವಿ ವಾ ಹ ವಾ ಗ ಬಹುದು. ಆದರೆ ಆಕೆಯು ಮಾತ್ರ ಇಂಗ್ಲೆಂಡಿನ ರಾಜ್ಞಿಯಾಗಲಾರಳೆಂದೊಬ್ಬರು ಸೂಚಿಸಿದರು. ರಾಜರು

# ಎಡ್ವರ್ಡರ ಸಿಂಹಾಸನ ತ್ಯಾಗ-

## ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ ರಾಜ್ಯತ್ಯಾಗದ ಕುರಿತು ಚರ್ಚೆ

ನಿರೀಕ್ಷಿಸತೊಡಗಿದರು. ಈ ಗೊಂದಲಕ್ಕೆ ತಾನೇ ಕಾರಣಳೆಂದು ಸತೀ ಸಿಂಪ್ಸನಳ ಹೃದಯವು ಕರು

ದು ಎಲ್ಲಾ ಪ್ರಾಂತ್ಯಗಳಲ್ಲಿ ಗುಪ್ತವಾಗಿ ಪ್ರಕಟವಾಯಿತು. ಮುಂದೇನು?- ಎಂಬೊಂದು ಪ್ರಶ್ನೆಯು

ಕಮಾಲ್ ಪಾಶರೊಡನೆ ಎಡ್ವರ್ಡ್-ಸಿಂಪ್ಸನರು.



ಟರ್ಕಿಗೆ ಎಡ್ವರ್ಡ್-ಸಿಂಪ್ಸನರು ಹೋದಾಗ ತೆಗೆದ ಛಾಯಾಚಿತ್ರವಿದು. ಚಿತ್ರದಲ್ಲಿ ಮುಸ್ತಾಫಾ ಕಮಾಲರ ಬಳಿಯಲ್ಲಿ ಸತೀ ಸಿಂಪ್ಸನಳನ್ನು ಕಾಣಬಹುದು.

ಣೆಯಿಂದ ಕರಗಿತು. ತರುಣ ಎಡ್ವರ್ಡರ ದೃಢನಿರ್ಧಾರವು ಮತ್ತಷ್ಟು ಬಲವಾಯಿತು. ಪ್ರಧಾನ ಮಂತ್ರಿ ಬಾಲ್ಡ್ವಿನರ ಪ್ರಚಾರವು ಪ್ರಬಲವಾಗಿ ನಡೆಯಿತು. ಕ್ಯಾಂಟ

ಲಂಡನಿನಿಂದ ಜಗತ್ತಿನ ಮೂಲೆ ಮೂಲೆಗಳಲ್ಲಿ ಪ್ರತಿಧ್ವನಿಸಿತು.

*

### ಖಾಸಗಿ ಪತ್ರಿ

ದಶಂಬರ ಲರಡು ಹಲವು

ತಮಗಿಚ್ಛೆ ಬಂದಂತೆ ವರ್ತಿಸಬಹುದಿತ್ತು. ಬಾಲ್ಡ್ವಿನ್ ಮಂತ್ರಿಮಂಡಲದ ಬುಡವನ್ನು ಕೆಡವಿ ಹೊಸ ಮಂತ್ರಿಮಂಡಲವನ್ನವರು ರಚಿಸಬಹುದಿತ್ತು. ಆದರೆ ಎಡ್ವರ್ಡರು ತನಗಾಗಿ ಸಾಮ್ರಾಜ್ಯವನ್ನು ಅವ್ಯವಸ್ಥೆಗೀಡು ಮಾಡಲಿಚ್ಛಿಸಲಿಲ್ಲ

### ಸತೀ ಸಿಂಪ್ಸನ್!

ಇಷ್ಟೆಲ್ಲಾ ಗೊಂದಲವಾಗುತ್ತಿರುವಾಗ ಸತೀ ಸಿಂಪ್ಸನಳಂತಹ ಸ್ತ್ರೀಯು ಎಷ್ಟು ಬೇಸರಪಟ್ಟಿರಬಹುದೆಂಬುದನ್ನೂ ಊಹಿಸಿರಿ. ತನಗಾಗಿ ಸಾಮ್ರಾಜ್ಯದ ಒಡೆತನವನ್ನು ಕಡೆಗಣಿಸಿ, ಅಧಿಕಾರ ತ್ಯಾಗಮಾಡ ಬೇಕಾಗಿಲ್ಲವೆಂದು ಆಕೆಯು ಎಡ್ವರ್ಡರಿಗೆ ಎಷ್ಟೋ ಬಾರಿ ಹೇಳಿದ್ದಳು. ಆಕೆಯ ಕುರಿತು ಅಪಪ್ರಚಾರವು ಪ್ರಚಂಡವಾಗಿ ನಡೆಯುತ್ತಿದ್ದರೂ ಎಡ್ವರ್ಡರ ಗೌರವವನ್ನುಳಿಸುವುದಕ್ಕಾಗಿ ಆಕೆಯು ಒಂದೇ ಒಂದು ಹೇಳಿಕೆಯನ್ನೂ ಹೊರಡಿಸಲಿಲ್ಲ. ಎಡ್ವರ್ಡರು ರಾಜರಾಗಿಯೇ ಆಕೆಯನ್ನು ಮದುವೆಯಾಗಬೇಕೆಂದು ಅವಳಿಚ್ಛಿಸಿದ್ದರೆ ಹಾಗೆಯೇ ಆಗುತ್ತಿತ್ತು. ಆದರೆ ಅಂತಹ ಬೇಜವಾಬ್ದಾರೀ ಸೂಚನೆಯನ್ನು ಕೊಡುವ ಗುಣವು ಸತೀ ಸಿಂಪ್ಸನಳಲ್ಲಿ ಇದ್ದಿಲ್ಲ.

*

ಕೇನ್ಸ್ ಪ ಸಿಂಪ್ಸ ಯನ್ನು ಪ್ರಯ ದಿಂದ ದರಿ ಸಿ ದಲ್ಲಿ ಹ ಎಡ್ವರ ಪಟ್ಟಸ ಆಗಿ ವಿ ದಂಪತಿಗ ಲಾರಂಭ ಎರಡು ಪತ್ರಿಕೋ ಕುರಿತು ಆಕೆಯು ಕೆಡುಕನ್ನು ಅದನ್ನ

# ...ೀ ಸಿಂಪ್ಸನಳ ನರಕಯಾತನೆ!

## ಅತ್ಯಂತ ಚರ್ಚಾಸ್ಪದ ಕಥೆಯ ೩ನೆ ಲೇಖಾಂಕ.

ಕೊಡನೆಶನಗಿರುವ ಮೈತ್ರಿಯ ನೇಣನ್ನು ಕಡಿದುಕೊಳ್ಳಲು ಕೂಡಾ ಸಿದ್ಧರೆಂದೂ ಹೇಳಿದರು.

### ಎಡ್ವರ್ಡರ ನಿರ್ಧಾರ

ತಾನು ಪ್ರೀತಿಸುತ್ತಿರುವ ತರುಣಿಯ ಒಡನಾಟವಿಲ್ಲದಿದ್ದರೆ ಗತ್ಯಂತರವಿಲ್ಲವೆಂದು ಎಡ್ವರ್ಡರು ನಿರ್ಧರಿಸಿದರು. ಆಕೆಯನ್ನು ರಾಜರಾಗಿದ್ದು ಮದುವೆಯಾಗುವುದು ಸಾಧ್ಯವಾಗದ ವಿಚಾರವೆಂದು ಬಾಲ್ಡ್ವಿನರು ಸ್ಪಷ್ಟವಾಗಿ ಹೇಳಿದರು. ತನ್ನ ವೈಯಕ್ತಿಕ ಇಚ್ಛೆಯನ್ನು ಪೂರ್ತಿಗೊಳಿಸುವುದಕ್ಕಾಗಿ ಜಗತ್ತಿನ ಮಹತ್ವದ ಅಧಿಕಾರಸ್ಥಾನದಿಂದ ದೂರವಾಗುವ ಶೋಚನೀಯ ನಿರ್ಧಾರವನ್ನು ಧೈರ್ಯದಿಂದ ಎಡ್ವರ್ಡರು ಮಾಡಿಯೇ ಬಿಟ್ಟರು.

*

### ಬ್ರಿಟಿಷ್ ಪಾರ್ಲಿಮೆಂಟಿನಲ್ಲಿ—

ಡಿಸೆಂಬರ ೧೦ರಂದು ಬ್ರಿಟಿಷ್ ಹೌಸ್ ಆಫ್ ಕಾಮನ್ಸ್ ಸಭೆ ಸೇರಿದೆ. ಪ್ರತಿಯೊಂದು ಮೂಲೆಯಲ್ಲಿಯೂ ಜನರು ಕಿಕ್ಕಿರಿದಿದ್ದಾರೆ. ನಿಶ್ಶಬ್ದ ವಾತಾವರಣ. ಮೂರೂವರೆ ತಾಸಿಗೆ ಪ್ರಧಾನ ಮಂತ್ರಿ ಬಾಲ್ಡ್ವಿನರು ಸಭೆಗೆ ಬಂದರು. ೫೧ ಪ್ರಶ್ನೆಗಳಿಗೆ ಉತ್ತರವಿತ್ತ ಬಳಿಕ ಬಾಲ್ಡ್ವಿನರು ಸ್ಪೀಕರರೆಡೆಗೆ ಮುಖಮಾಡಿ ಹೀಗೆಂದರು:

“ಮಹಾರಾಜರು ಸ್ವತಃ ಬರೆದು ಸಹಿಹಾಕಿದೊಂದು ಸಂದೇಶವು ಬಂದಿದೆ.”

ಕೂಡಲೆ ಹೌಸ್ ಆಫ್ ಕಾಮನ್ಸಿನ ಮೂಲೆಮೂಲೆಯಿಂದ ದೀರ್ಘ ನಿಶ್ವಾಸದ ಶಬ್ದವು ಕೇಳಿಸಿತು. ಸ್ಪೀಕರರು ರಾಜರ 'ಸಂದೇಶ'ವನ್ನು ಕೈಯಲ್ಲಿ ಹಿಡಿದೊಡನೆಯೇ ಅವರ ಎರಡೂ ಕೈಗಳು ನಡುಗಲಾರಂಭಿಸಿದುವು.

ಅಧ್ಯಕ್ಷರು ರಾಜರ ಪತ್ರವನ್ನು ಕೆಳಗಿನಂತೆ ಓದಿದರು. ಕಾಮನ್ಸಿನ ಎಲ್ಲಾ ಸದಸ್ಯರು ಮೌನವಾಗಿ ಕುಳಿತು ಎಡ್ವರ್ಡರ ಚರಿತ್ರಾರ್ಹ

'ಹೀಗಿದೆ ವೇಲ್ಸ್' ಎನ್ನುತ್ತಿದ್ದಾರೆ. ಲಾಯಡ್ ಜಾರ್ಜರು.



ಇಂಗ್ಲೆಂಡಿನ ಪ್ರಸಿದ್ಧ ರಾಜಕಾರಣಿಗಳಾದ ಲಾಯಡ್ ಜಾರ್ಜರು ವೇಲ್ಸಿನಲ್ಲಿ ತರುಣ ಎಡ್ವರ್ಡರೊಡನೆ ಮಾತಾಡುತ್ತಿರುವುದು.

ಪತ್ರ ವಾಚನವನ್ನು ಕೇಳಿದರು.

“ದೀರ್ಘವಾಗಿ ಯೋಚಿಸಿದ ಬಳಿಕ ನಾನು ನನ್ನ ತಂದೆಯವರು ಬಿಟ್ಟು ಕೊಟ್ಟಿರುವ ಸಿಂಹಾಸನವನ್ನು ತ್ಯಾಗ ಮಾಡುವ ದೃಢ ನಿರ್ಧಾರ ಮಾಡಿದ್ದೇನೆ. ನಾನು ಅನುಸರಿಸುವ ಧೋರಣೆಯ ಯೋಗ್ಯಾಯೋಗ್ಯತೆಯನ್ನು ನಾನು ಪೂರ್ಣವಾಗಿ ಅರಿತಿರುವುದಲ್ಲದೆ ನನ್ನ ಜನರು ಈ ನಿರ್ಣಯದ ಪೂರ್ವಾಪರಗಳನ್ನು ಸರಿಯಾಗಿ ತಿಳಿಯುವರೆಂದು ಭಾವಿಸುತ್ತೇನೆ.

‘ಈ ಸಂದರ್ಭದಲ್ಲಿ ನಾನು ನನ್ನ ಖಾಸಗಿ ಮನೋವೃತ್ತಿಯ ಕುರಿತು ಯೋಚಿಸಲು ಬಯಸುವುದಿಲ್ಲ.

ಆದರೆ ರಾಜರ ಹೆಗಲಿನ ಮೇಲಿರುವ ಜವಾಬ್ದಾರಿಯ ಭಾರವು, ಪ್ರತ್ಯೇಕವಾಗಿ ನಾನು ಈಗ ತೋರಿಸಬೇಕಾದ ಜವಾಬ್ದಾರಿಯು ಸಾಮಾನ್ಯವಾದುದಲ್ಲವೆಂಬುದನ್ನು ತಿಳಿಯಬೇಕಾಗಿದೆ.

(೫೫ನೆ ಪುಟ ನೋಡಿರಿ)




ದೀಪದಡಿ ಕತ್ತಲೆ! ಲೋಕಕ್ಕೇ ಬೆಂಕಿ ಹಿಡಿಯಲಿದ್ದುದನ್ನು ನಂದಿಸಿಬಿಟ್ಟವರು ಚೇಂಬರ್ಲಿನರು; ಅವರ ರಾಜ್ಯವಾದ ಪೆಲೆಸ್ಟೈನಿನಲ್ಲೇ ಅರಬದಂಗೆಯ ಬೆಂಕಿಯೆದ್ದಿದೆ!

ooo

ಬೆಂಕಿಯನ್ನು ಬೆಂಕಿಯಿಂದ ನಂದಿಸಲಾಗುವದಿಲ್ಲ—ನೀರು ಬೇಕು. ಆದ್ದರಿಂದಲೇ ಮಿ. ಚೇಂಬರ್ಲಿನರು ಹಿಟ್ಲರನಿದಿರು ಕಣ್ಣೀರು ಸುರಿಸಿ ಆ ದಿನದ ಬೆಂಕಿ ನಂದಿಸಿದ್ದರು.

ooo

ಪೆಲೆಸ್ಟೈನಿನ ಬೆಂಕಿಯ ಜಾತಿ ಬೇರೆ. ಅಲ್ಲಿಯ ಬೆಂಕಿಯನ್ನು ಬೆಂಕಿಯಿಂದಲೇ ನಂದಿಸಬೇಕೆಂದು ಬ್ರಿಟಿಷರ ಸೈನ್ಯ ಹೊಕ್ಕಿದೆ; ಕೋವಿಗಳಿಂದ ಬೆಂಕಿ ಹಾರುತ್ತಿದೆ!

ooo

ಸುಡೆಟನ್ ಭಾಗಗಳಲ್ಲಿ ಜರ್ಮನರ ಸಂಖ್ಯೆ ಜಾಸ್ತಿಯಿತ್ತು. ಪೆಲೆಸ್ಟೈನಿನಲ್ಲಿ ಒಂದೂ ಮುಕ್ಕಾಲು ಲಕ್ಷ ಯೆಹೂದ್ಯರಿದ್ದರೆ ಏಳೂವರೆ ಲಕ್ಷ ಅರಬರಿದ್ದಾರೆ.

ooo

ಆದರೆ ಸುಡೆಟನ್ ಭಾಗವು ಜರ್ಮನರಿಗೆ ಹೋದಂತೆ ಪೆಲೆಸ್ಟೈನ್ ಅರಬರದಾಗುವದಿಲ್ಲ; ಹಿಂದೂದೇಶವು ಹಿಂದೀಯರದಾಗುವದಿಲ್ಲ!

ooo

ಜನಸಂಖ್ಯೆಯ ಹೆಚ್ಚುಗೆಯೇ ಚೇಂಬರ್ಲಿನರ ಮೆಚ್ಚುಗೆಯಲ್ಲ. ಚೇಂಬರ್ಲಿನರ ನಿಘಂಟುವಿನಲ್ಲಿ ಬೆಚ್ಚುವದಕ್ಕೇನೆ ಮೆಚ್ಚುವದೆಂಬ ಅರ್ಥ!

---

ಜಪಾನಿಯರು ಮೊನ್ನೆಯವರೆಗೆ ಚೀನದ ದಕ್ಷಿಣ ಭಾಗದ ಮೇಲೆ ಬೀಳಲು ಹೆದರುತ್ತಿದ್ದರು. ಆ ಭಾಗದ ಮೇಲೆ ಬೀಳುವದೆಂದರೆ ಬ್ರಿಟಿಷರ ಮೇಲೆ ಬಿದ್ದಹಾಗೆ.

ooo

ಮ್ಯೂನಿಕ್ ಒಪ್ಪಂದವಾದ ಮೇಲೆ ಬ್ರಿಟಿಷರ ಮೇಲೆ ಬೀಳುವದರಲ್ಲಿ ಸುಖವಿದೆ ಎಂದು ಗೊತ್ತಾಯಿತು-ಈಗ ಒಂದೇ ಸವನೆ ಚೀನದ ದಕ್ಷಿಣದ ಕಡೆಗೆ ಧಾವಿಸುತಿದ್ದಾರೆ.

ooo

ಇದರಿಂದ ಬ್ರಿಟಿಷರ ಪ್ರಾಮುಖ್ಯ ವ್ಯಾಪಾರಸ್ಥಳವಾದ 'ಹೋಂಗ್ ಕೊಂಗ್' ಪಟ್ಟಣದ ಚಲನವಲನವು ನಿಂತು ಹೋಗುವದು—ಅದರ ಪರಿಣಾಮವಾಗಿ ಬ್ರಿಟಿಷರ ನರನಾಡಿಗಳ ಚಲನವಲನವು ತೀವ್ರತೆಯನ್ನೈದುವದು.

ooo

ಆದರೆ ಬ್ರಿಟಿಷರ ಆರೋಗ್ಯದ ಕುರಿತು ಅನ್ಯರು ಚಿಂತಿಸಬೇಕಾಗಿಲ್ಲ. ಎಂತಹ ಪರಿಸ್ಥಿತಿಯಲ್ಲಿಯೂ ತಮ್ಮ ನರನಾಡಿಗಳು ಉದ್ರೇಕಗೊಳ್ಳದಂತೆ ನೋಡಿಕೊಳ್ಳುವುದೇ ಅವರ ಈಗಿನ ಧೋರಣೆ.

ooo

ತಮ್ಮನ್ನು ತಾವೇ ಕಾಪಾಡಿಕೊಳ್ಳಲು ಶಕ್ತರಾದವರ ಜಾಗ್ರತೆಯನ್ನು ಅನ್ಯರೇಕೆ ತೆಗೆದುಕೊಳ್ಳಬೇಕು? ಆದ್ದರಿಂದ ಜಪಾನರೀಗ ಬ್ರಿಟಿಷರ ಕಡೆಗೆ ಲಕ್ಷ್ಯವಿಡುವದನ್ನು ಬಿಟ್ಟಿದ್ದಾರೆ!

---

ರಾಜಕೋಟೆಯೆಂದರೆ ಗುಜರಾತಿನ ಒಂದು ಸಣ್ಣ ಸಂಸ್ಥಾನ. ಸಂಸ್ಥಾನ ಸಣ್ಣದಾದರೂ ಸಂಗತಿ ದೊಡ್ಡದು.

ooo

ಹಿಂದೆ ದಿವಾನರಾಗಿದ್ದ ವೀರವಲ್ಲರೆಂಬವರು ಪ್ರಜೆಗಳನ್ನು ಗೋಳಿಡಿಸುವದರಲ್ಲಿಯೂ ವೀರಮಲ್ಲರಾಗಿದ್ದರು!

ooo

ಬ್ರಿಟಿಷ್ ಸರಕಾರವು ಈ ದಿವಾನರನ್ನು ತೆಗೆದು ಹಾಕಿ ಸರ್. ಪ್ಯಾಟ್ರಿಕ್ ಕ್ಯಾಡೆಲ್ ಎಂಬವರನ್ನು ನೇಮಿಸಿತು.

ooo

ಹಿಂದಿನವರಂತೆ ಪ್ರಜೆಗಳನ್ನು ಬಡಿಯಲು ಇಂದಿನವರು ಒಪ್ಪುವದಿಲ್ಲ;ಆದ್ದರಿಂದ ಅವರನ್ನು ಡಿಸ್‌ಮಿಸ್ ಮಾಡಿದ್ದೇನೆ - ಎನ್ನುತ್ತಾರೆ ರಾಜರು.

ooo

ರಾಜರಿಗೆ ಆ ಅಧಿಕಾರವಿಲ್ಲ—ಎಂದು ಗಟ್ಟಿ ಕುಳಿತಿದ್ದಾರೆ ಇಂದಿನ ದಿವಾನರು; ರಾಜರ ಬೆನ್ನ ಹಿಂದೆ ನಿಂತು ಹೀಗೆಲ್ಲಾ ಮಾಡಿಸುತಿದ್ದಾರೆ ಹಿಂದಿನ ದಿವಾನರು!

ooo

'ರಾಜರಿಗೇನು ಚಿರಕಾಲ ನಿಲ್ಲುವೆನೆಂಬ ಧೈರ್ಯವಿದೆಯೆ?' ಎಂದು ಪ್ರಜೆಗಳ ಪರವಾಗಿ ಸರದಾರ್ ಪಟೇಲರು ಕೇಳುತ್ತಿದ್ದಾರೆ.

ooo

ಹೀಗೆ ರಾಜಕೋಟದಲ್ಲಿ ಇರುವವರು ಯಾರು ಹೋಗುವವರು ಯಾರು ಎಂಬುದೇ ತೀರ್ಮಾನವಾಗಿಲ್ಲ. ಈ ವರೆಗೆ ಎಲ್ಲರೂ ಇದ್ದಾರೆ. ಒಂದೇ ಬುದ್ಧಿಯಿಲ್ಲದವರು ಒಂದೇ ಕಡೆಯಲ್ಲಿದ್ದಾರೆ!

— ದೂಮು

---

ಗೆಳೆಯರ ತಂಡದ ಸದಸ್ಯರಾಗಿ ಅಖಿಲ ಕರ್ನಾಟಕದ ಗೆಳೆಯರೊಡನೆ ಸಂಬಂಧ ಬೆಳೆಸಿರಿ.

# ಗೆಳೆಯರ ತಂಡ

[ ಇಪ್ಪತ್ತೈದು ವರುಷಗಳಿಗೆ ಮೀರದ ತರುಣ ತರುಣಿಯರಿಗೆ ಮಾತ್ರ. ]

ಗೆಳೆಯರ ತಂಡದ ಚಟುವಟಿಕೆಗಳಲ್ಲಿ ಭಾಗವಹಿಸಿ ನಿಮ್ಮ ಲೋಕಜ್ಞಾನವನ್ನು ಹೆಚ್ಚಿಸಿರಿ.

**ಗೆಳೆಯರ ತಂಡಕ್ಕೆ ಬರೆಯುವಾಗ "ಗೆಳೆಯರ ತಂಡ", C/o ಅಂತರಂಗ, ಉಡುಪಿ, ಎಂದು ಬರೆಯಿರಿ.**

**ಗೆಳೆಯರೆ,**

**ವಿಶಾಲಕರ್ನಾಟಕದ ವಿವಿಧ ಭಾಗಗಳ ಹಲವು ಗೆಳೆಯರು ಈಗಾಗಲೆ ತಂಡದ ಸದಸ್ಯರಾಗಿದ್ದಾರೆ. ಇದು ಶುಭ ಲಕ್ಷಣವೆಂದು ನಾನು ನಿಮಗೆ ಹೇಳಬೇಕಾಗಿಲ್ಲ.**

**ಮುಂದಿನ ಬಾರಿ ಗೆಳೆಯರಿಗಾಗಿ ಜಗತ್ತಿನ ಅಡ್ಡ ಕಸಬುಗಳಲ್ಲೊಂದಾದ 'ಅಂಚೆಚೀಟಿನ ಪ್ರಪಂಚ' ವೆಂಬೊಂದು ವಿಭಾಗವನ್ನು ಪ್ರಾರಂಭಿಸುವೆನು. ಚೀಟು ಸಂಗ್ರಹಿಸುವ ಗೆಳೆಯರಿಗೆ ಇದು ಅತ್ಯುಪಯುಕ್ತವೆಂಬುದು ಸ್ವಯಂವ್ಯಕ್ತ.**

**ಗೆಳೆಯರ ತಂಡದ ಸದಸ್ಯರೊಳಗೆ ಪತ್ರವ್ಯವಹಾರದ ಏರ್ಪಾಡು, ಪ್ರಾಮುಖ್ಯ ವಿಚಾರಗಳ ಕುರಿತು ಗೆಳೆಯರ ಸಂಕ್ಷಿಪ್ತ ಲೇಖನಗಳನ್ನು ಪ್ರಕಟಿಸುವ ವ್ಯವಸ್ಥೆ ಮತ್ತು ಇಂತಹ ಹಲವಾರು ವಿಷಯಗಳನ್ನು ಸದ್ಯದಲ್ಲಿಯೇ ನೀವು ನಿರೀಕ್ಷಿಸಬಹುದು.**

**ಗೆಳೆಯರ ತಂಡದ ಸದಸ್ಯರು ತಂತಮ್ಮ ಊರುಗಳಿಂದ ಆದಷ್ಟು ಸದಸ್ಯರನ್ನು ಸೇರಿಸುವ ವ್ಯವಸ್ಥೆ ಮಾಡಿದರೆ ತಂಡದ ಸದಸ್ಯರ ಸಂಖ್ಯೆಯು ಹೆಚ್ಚಿ, ತಂಡವು ಹಲವು ಬಗೆಯ ಉಪಯುಕ್ತ ಚಟುವಟಿಕೆಗಳನ್ನು ಮಾಡಲು ಪ್ರಾರಂಭಿಸಬಹುದಾಗಿದೆ.**

**ಹತ್ತು ಸದಸ್ಯರನ್ನು ತಂಡಕ್ಕೆ ಮಾಡಿಕೊಡುವ ಗೆಳೆಯರಿಗೆ ಒಂದು** ಉಪಯುಕ್ತ ಕನ್ನಡ ಗ್ರಂಥವು ಬಹುಮಾನವಾಗಿ ಕೊಡಲ್ಪಡುವುದು.

ಎಲ್ಲಾ ಗೆಳೆಯರು ಉತ್ಸಾಹದಿಂದ ಸಹಕರಿಸುವರೆಂದು ನಿರೀಕ್ಷಿಸುತ್ತಿರುವ

ನಿಮ್ಮ

**'ಗೆಳೆಯ'**

**ತಂಡದ ಸದಸ್ಯರು.**

ಈ ಕೆಳಗಿನ ಪ್ರಿಯ ಗೆಳೆಯರನ್ನು ಗೆಳೆಯರ ತಂಡದ ಸದಸ್ಯರನ್ನಾಗಿ ಸೇರಿಸಿ ಕೊಳ್ಳಲು 'ಗೆಳೆಯ' ನಿಗೆ ತುಂಬಾ ಸಂತೋಷವೆನಿಸುತ್ತದೆ. ಮತ್ತು ಅವರು ಉತ್ಸಾಹದಿಂದ ತಂಡಕ್ಕೆ ಸೇರಿರುವುದಕ್ಕಾಗಿ ಅವರಿಗೆ ಅಭಿವಂದನೆಗಳು.

**೧. ಶ್ರೀ. ಯಚ್. ಗೋಪಾಲ ಪೈ, ಸೋಮೇಶ್ವರ, ಪೋಸ್ಟ್ ಹೆಬ್ರಿ.**

ನಿಮ್ಮ ಸದಸ್ಯತನದ ನಂಬರು ೧.

೦೦

**೨. ಶ್ರೀ. ರಘುವೀರ ವಂಕಟರಮಣ ಪೋಕಳೆ, C/o ಶ್ರೀ. ವಿ. ಯಸ್. ಶ್ಯಾನುಭಾಗ, ಬೇಂಕ್ ಏಜಂಟ್, ಕುಮುಟಾ ಉತ್ತರ ಕನ್ನಡ ಜಿಲ್ಲೆ.**

ನಿಮ್ಮ ಸದಸ್ಯತನದ ನಂಬರು ೨.

೦೦

**೩. ಶ್ರೀ. ಟಿ. ಕೆ. ರಾಮಾಚಾರ್, ಫ್ಲಾಟ್ ನಂಬ್ರ ೫೨೪, ಕಾಲೇಜ್ ರೋಡ್, ಮಾಟುಂಗ ಬೊಂಬಾಯಿ ೧೯.**

ನಿಮ್ಮ ಸದಸ್ಯತನದ ನಂಬರು ೩.

೦೦

**೪. ಶ್ರೀ. ಯನ್. ಶಂಕರ ರಾವ್, ೧/೪, W. A. T. ಸ್ಟ್ರೀಟ್, ಬಸವನಗುಡಿ, ಬೆಂಗಳೂರು.**

ನಿಮ್ಮ ಸದಸ್ಯತನದ ನಂಬರು ೪.

೦೦

**೫. ಶ್ರೀ. ಬಿ. ಆರ್. ಹೆರಕಲ್, ಶಿಕ್ಷಕ, ವೆಂಕಟ ಪೇಟೆ, ಬಾಗಲಕೋಟೆ.**

ನಿಮ್ಮ ಸದಸ್ಯತನದ ನಂಬರು ೫.

ವಿ. ಸೂ: 'ಹೆರಕಲ ಬಂಧುಗಳು' ಎಂದು ನೀವು ಹೆಸರನ್ನು ಬರೆದಿದ್ದೀರಿ. ಆದುದರಿಂದ ನಿಮ್ಮ ಪೈಕಿ ಒಬ್ಬರನ್ನು ಮಾತ್ರ ಸದಸ್ಯರನ್ನಾಗಿ ಸೇರಿಸಲಾಗಿದೆ. ಇನ್ನೊಬ್ಬರು ಬೇಗನೆ ಸದಸ್ಯರಾಗುವರೆಂದು ಬಯಸುವ.

ನಿಮ್ಮೊಲವಿನ

'ಗೆಳೆಯ'

---

(೨೩ನೆ ಪುಟದಿಂದ)

ಹೇಗಿದ್ದರೂ ಶ್ರೀಗಳಾದ ಬೆಸ್ತ ಸುಬ್ಬ ಮತ್ತು ಡಾ| ಶ್ರೀಧರರಾಯರ ಸಂಪಾದಕತ್ವದಲ್ಲಿ ಆ ಮಗುವು 'ಹೊರಡಿಸಲ್ಪಟ್ಟಿದೆ'ಯೆಂದು 'ಮಗುವಿನ ತಂದೆ'ಯೆಂಬ ಕತೆಯ ಜನಕರು ಹೇಳಿದ್ದಾರೆ. ನಿಮ್ಮ ಅಭಿಪ್ರಾಯದಲ್ಲಿ ಮಗುವಿನ ನಿಜವಾದ ತಂದೆಯಾರು?

# ಒಂದು ತುತ್ತು ಅನ್ನಕ್ಕಾಗಿ

# ತರುಣಿಯರ ಮಾನ ದಾನ!

## ಬ್ರಿಟಿಷ್ ಪೆಲೆಸ್ತೈನಿನಲ್ಲಿ ಯೆಹೂದೀ ಸುಂದರಿಯರ ಕರುಣಾಜನಕ ಜೀವನ.

ಪೆಲೆಸ್ತೈನಿನಲ್ಲಿ ನಡೆಯುತ್ತಿರುವ ಬ್ರಿಟಿಷ್ ದಬ್ಬಾಳಿಕೆಗಿಂತಲೂ ಮಹತ್ವದ ಸಮಸ್ಯೆಯೊಂದು ಅಲ್ಲಿಯ ತರುಣಿಯರನ್ನು ಕಳೆದ ಒಂದೆರಡು ವರುಷಗಳಿಂದ ಬಾಧಿಸುತ್ತಿದೆ. ಸುಂದರಿಯರಾದ ಎಷ್ಟೋ ಮಂದಿ ಯೆಹೂದಿ ತರುಣಿಯರು ತಮ್ಮ ಜೀವನವನ್ನು ಕೆಡಿಸುತ್ತಿದ್ದಾರೆ.

**ಜರ್ಮನಿಯಲ್ಲಿ ಅತ್ಯಾಚಾರ!**

ಸರ್ವಾಧಿಕಾರಿ ಹೆರ್ ಹಿಟ್ಲರನ ನಿರ್ಣಯಕ್ಕನುಸಾರವಾಗಿ ಯೆಹೂದಿಯರು ಜರ್ಮನಿ ಮತ್ತು ಆಸ್ಟ್ರಿಯದಿಂದ ತಮ್ಮ ಸಂಪತ್ತನ್ನು ಕೂಡಾ ಬಿಟ್ಟು, ದೇಶಾಂತರ ಮಾಡಬೇಕಾಗಿದೆ. ನಾಝಿ ಅಧಿಕಾರಿಗಳ ವಿಚಿತ್ರ ನಿಯಮಗಳಿಂದಾಗಿ ಒಮ್ಮೆಗೇ ಯೆಹೂದಿಯರು ಜರ್ಮನಿ ಅಥವಾ ಆಸ್ಟ್ರಿಯವನ್ನು ಬಿಟ್ಟುಹೋಗುವುದು ಕಷ್ಟವಾಗಿದೆ. ಎಷ್ಟೋ ನಿರ್ಭಾಗ್ಯ ತರುಣಿಯರನ್ನು ನಾಝಿಗಳು ಒಂದೆರಡು ದಿನಗಳ ಮಟ್ಟಿಗೆ ತಮ್ಮ ಹೊಟೆಲಿನಲ್ಲಿ ಅಥವಾ ಇತರೆಡೆಗಳಲ್ಲಿ ನಿಲ್ಲಿಸಿಕೊಳ್ಳುವುದುಂಟು.

**ಅಂದಿನ ಚೆಲುವಿನ ಬೀಡು- ಇಂದಿನ ಮಸಣದ ಗೂಡು!**



ಜರ್ಮನಿಯ ಯೆಹೂದಿ ತರುಣಿಯು ಪೆಲೆಸ್ತೈನಿನ "ಏಕರಾತ್ರಿ ವಿವಾಹ" ಮಾಡಿಕೊಂಡು, ಮಾನವನ್ನು ಗಾಳಿಯಲ್ಲಿ ತೂರಿಬಿಟ್ಟು ಬೇಜವಾಬ್ದಾರೀ ಗಂಡಂದಿರಿಗೆ ಸುಖವನ್ನಿತ್ತು, ನಿರ್ಭಾಗ್ಯ ಮಕ್ಕಳಿಬ್ಬರನ್ನು ಹಡೆದು, ಬೀದಿಯಲ್ಲಿ ಅಂಡಲೆದು, ಬೇಡಿ ಹೊಟ್ಟೆ ಹೊರೆಯುತ್ತಿದ್ದಾಳೆ.

ಯೆಹೂದಿಯರೊಡನೆ ಸಂಪರ್ಕ ಬೆಳೆಸಬಾರದೆಂಬ ನಿಯಮವಿದ್ದರೂ ಹಲವರು ಯೆಹೂದಿ ತರುಣಿಯರನ್ನು ಕೆಡಿಸಿ ಅವರನ್ನು ನಿರ್ಗತಿಕರಾಗಿ ಮಾಡುವುದುಂಟು. ನಾಝಿ ಕಾಯಿದೆಯು ಇಂತಹ ಅತ್ಯಾಚಾರಗಳನ್ನು ಕೂಡಾ ಸಹಿಸಿಕೊಳ್ಳುತ್ತದೆ.

- **ಹೈಫಾ ನಗರದಲ್ಲಿ ವ್ಯಭಿಚಾರ ಗೃಹಗಳು!**

o o

- **ಕಾನೂನನ್ನು ಧಿಕ್ಕರಿಸಿಯೂ ತರುಣಿಯರ ವಿಕ್ರಯ.**

o o

- **ಜರ್ಮನಿಯಲ್ಲಿ ನಾಝಿ ಸೈನಿಕರ ಅತ್ಯಾಚಾರ.**

o o

- **ಯೆಹೂದಿ ತರುಣಿಯರ "ಏಕ ರಾತ್ರಿ ವಿವಾಹ."**

## ಪೆಲೆಸ್ತೈನಿಗೆ ಯೆಹೂದಿ ತರುಣಿಯರು.

ಜರ್ಮನಿ ಮತ್ತು ಇಟೆಲಿಗಳು ಯೆಹೂದಿಯರನ್ನು ಕಡೆಗಣಿಸಲಾರಂಭಿಸಿರುವುದರಿಂದ ಸಾವಿರಗಟ್ಟಲೆ ಯೆಹೂದಿಯರು ಉಳಕೊಳ್ಳಲಿಕ್ಕಾಗಿ ಸ್ಥಳಸಿಗದೆ ಬಳಲುತ್ತಿದ್ದಾರೆ. ಪೆಲೆಸ್ತೈನಿಗೆ ಹೋಗಬಹುದೆಂದು ಎರಡು ವರುಷಗಳ ಮೊದಲೇ ಕಾಯಿದೆಯಿದ್ದರೂ ಪೆಲೆಸ್ತೈನಿನ ಅವ್ಯವಸ್ಥೆಯಿಂದಾಗಿ ಇಂತಿಷ್ಟೇ ಮಂದಿ ಯೆಹೂದಿಯರು ಅಲ್ಲಿಗೆ ಹೋಗಬಹುದೆಂಬ ನಿಯಮವಿದೆ. ಸಂದರ್ಶಕರಾಗಿ ಹೋಗುವುದು ಕೂಡಾ ಕಾಯಿದೆಬಾಹಿರವಾಗಿರುವುದರಿಂದ ಯೆಹೂದಿ ತರುಣಿಯರು ಹೊಸ ಉಪಾಯವೊಂದನ್ನು ಕಂಡುಹಿಡಿದರು.

### ಸೌಂದರ್ಯ ವಿಕ್ರಯದಿಂದ ದೇಶ ಪ್ರವೇಶ!

ಯೆಹೂದಿತರುಣಿಯರು ಸುಂದರಿಯರೆಂಬುದು ಲೋಕಪ್ರಸಿದ್ಧವಾಗಿದೆ. ನಾಯಿನರಿಗಳಂತೆ ತಮ್ಮನ್ನು ಇಟಲಿ ಜರ್ಮನಿಗಳಿಂದ ಹೊಡೆದೋಡಿಸುವುದರಿಂದ ಪವಿತ್ರ ಭೂಮಿಯಾದ ಪೆಲೆಸ್ತೈನಿಗೆ ಹೋಗುವುದು ಉತ್ತಮವೆಂದು ಯೋಚಿಸಿದರೂ ಕಾಯಿದೆಯ ಬೇಲಿಯು ಅವರ ಉಪಾಯಕ್ಕೆ ತೊಂದರೆ ಮಾಡಿತು. ಸಂದರ್ಶಕರಾಗಿ ಹೋದರೆ ಮೂರೇ ತಿಂಗಳಲ್ಲಿ ಪೆಲೆಸ್ತೈನನ್ನು ಬಿಟ್ಟು ಹೋಗಬೇಕಾದುದರಿಂದ ಅಲ್ಲಿಯೇ ಕಾಯಮಾಗಿ ನಿಲ್ಲುವ ಹಂಚಿಕೆಯೊಂದನ್ನು ಮಾಡಲು ಯೆಹೂದಿ ತರುಣಿಯರು ಹಿಂಜರಿಯಲಿಲ್ಲ. ತಮ್ಮ ದೇಹವನ್ನು ಮಾರಿಯಾದರೂ ಬದುಕುವುದು ಲೇಸೆಂದು ನಿರ್ಣೈಸುವ ಪರಿಸ್ಥಿತಿಯು ಅವರದಾಗಿದೆ.

### ಹೈಫಾನಗರದಲ್ಲಿ-

ಹೈಫಾ ಬಂದರದಲ್ಲಿ ಆಗತಾನೆ ಜರ್ಮನಿಯಿಂದ ಬಂದ ನೂರಾರು ಯೆಹೂದಿಯರು ಅತ್ತಿತ್ತ ತಿರುಗುತ್ತಿದ್ದಾರೆ. ದೇಶಸಂಚಾರದ ಸರ್ಟಿಫಿಕೇಟು ಅವರೊಡನಿಲ್ಲ. ನಾಝೀ ಅಧಿಕಾರಿಗಳ ಕ್ರೂರಬಲೆಯಿಂದ ತಪ್ಪಿಸಿಕೊಂಡು ಬಂದ ಸುಂದರಿಯರು ಕೈಯ್ಯಲ್ಲಿ ಹಣವಿಲ್ಲದೆ, ಉಡಲು ಸರಿಯಾದ ಬಟ್ಟೆಬರೆಗಳಿಲ್ಲದೆ ನಿರ್ಗತಿಕರಂತೆ ಅಂಡಲೆಯುವ ಕರುಣಾಜನಕ ದೃಶ್ಯವು ಅದೆಷ್ಟೋ ಪೆಲೆಸ್ತೈನ್ ಯುವಕರ ಹೃದಯವನ್ನು ಕರಗಿಸಿತ್ತು.

### ಕರುಣಾಜನಕ ಕಥೆ!

ಬರ್ಬರಾ ಬೋರ್ಡ್ ಎಂಬಾಕೆ "ಪೆಲೆಸ್ತೈನಿನಲ್ಲಿ ಯೆಹೂದಿಯರ ಪಾಡು" ಎಂಬೊಂದು ಲೇಖನದಲ್ಲಿ ಹೀಗೆ ಬರೆಯುತ್ತಾಳೆ:

"ನಾನು ಪೆಲೆಸ್ತೈನಿಗೆ ಹೋಗಿದ್ದೆ. ಹೈಫಾ ನಗರದಲ್ಲಿಳಿದಾಗ ನೂರಾರು ತರುಣಿಯರು ದಕ್ಕೆಗೊರಗಿ ಬೇಡುವ ಕನ್ಯೆಯರಂತೆ ನಿಂತಿದ್ದರು. ಎಷ್ಟೋಮಂದಿ ತಲೆಹೋಕ ಯುವಕರು ಅವರನ್ನು ಅವಮಾನಿಸುತ್ತಿದ್ದರು.

### ಒಂದಿಷ್ಟು ಆಹಾರಕ್ಕಾಗಿ-

"ನಾನು ನೋಡುತ್ತಿದ್ದಂತೆಯೇ ಬಹಳ ಸುಂದರಿಯಾಗಿ ತೋರುವವಳೊಬ್ಬಳು ಸಮೀಪದಲ್ಲಿದ್ದ ಮೋಟಾರಿನ ಬಳಿಗೆ ಹೋದಳು. ಡ್ರೈವರನು ಅದರೊಳಗೆ ಕುಳಿತಿದ್ದ. ಅವಳ ನಟನೆಯನ್ನು ನೋಡುವಾಗ ಅವನೊಡನೆ ಸಹಾಯವನ್ನು ಕೋರಿದಳೆಂದು ನನಗನಿಸಿತು. ದಾರಿದ್ರ್ಯವು ಎಂತಹ ಅವಸ್ಥೆಯನ್ನುಂಟುಮಾಡುತ್ತದೆಂಬುದನ್ನು ನೋಡಲಿಕ್ಕಾಗಿ ನಾನು ನನ್ನ ಮಗನೊಡನೆ ಮೋಟಾರಿನ ಬಳಿ ಸಾರಿದೆ. ಇನ್ನೊಂದು ಬದಿಯಲ್ಲಿ ನಿಂತಿದ್ದುದರಿಂದ ನಮ್ಮನ್ನವರು ನೋಡುತ್ತಿದ್ದಿಲ್ಲ. ಅವರೊಳಗೆ ಮಾತುಕತೆಯು ನಡೆಯುತ್ತಿತ್ತು. ನಾವು ಕಿವಿಗೊಟ್ಟು ಕೇಳುತ್ತಿದ್ದೆವು.

ಆಕೆ—'ನನಗೊಂದಿಷ್ಟು ಆಹಾರ ತೆಗೆಸಿ ಕೊಡುವಿರಾ?'

ಅವನು—'ಆಹಾರವು ಸುಮ್ಮಗೆ ಸಿಗುತ್ತದೆಯೇ? ಕೊಡಬಹುದು, ನೀನೇನು ಕೊಡುತ್ತಿ?'

ಆಕೆ—'ನಾನು ಬಡವೆ, ಹಿಟ್ಲರನ ಉಪದ್ರವನ್ನು ತಾಳದೆ ಇಲ್ಲಿಗೆ ಬಂದಿದ್ದೇನೆ. ನನ್ನ ಗಂಡ ವಿಲ್‌ಹೆಲ್ಮ್ ರೋಜಸ್ರ್ ಎಂಬವರನ್ನು ಡಾಚ್ಟೋ ಸೆರೆಮನೆಗೆ ಹಾಕಿದರೆಂದು ನನಗೆ ತಿಳಿಯಿತು. ರಾಜಕೀಯ ಕೈದಿಯಾದುದರಿಂದ ನಾಝೀ ಪೋಲೀಸರು ನನ್ನ ಮನೆಗೆ ಬಂದು ಎಲ್ಲವನ್ನೂ ಝಡ್ತಿ ಮಾಡಿದರು. ಸಾಲದುದಕ್ಕೆ ನನ್ನ ಮೇಲೆ ಅತ್ಯಾಚಾರವನ್ನು ನಡೆಸಿದರು. ನನ್ನ ತಂಗಿ....ಅಯ್ಯೋ' ಎಂದು ಕೂಗಿದಳಾಕೆ.

'ಹೇಳು, ಏನಾಯ್ತು' ಎಂದನಾ ತರುಣ.

'ನನ್ನ ತಂಗಿ ಹೆಲೆನ್ ಹದಿನೆರಡು ವರುಷದ ಬಾಲಕಿ. ನೋಡಲು ನನ್ನಿಂದಲೂ ಸುಂದರಿಯಾಗಿದ್ದಳು. ನನ್ನ ಮೇಲೆ ಅತ್ಯಾಚಾರ ನಡೆಸಿದ್ದು ಸಾಲದೆ ನಾಲ್ಕೈದು ಮಂದಿ ಕೂಡಿ ನೆರೆಯದ ಹುಡುಗಿ ಹೆಲೆನಳ ಮೇಲೆ ಪ್ರಾಣಿಗಳಂತೆ ಅತ್ಯಾಚಾರ

ನಡೆಸಿದರು. ಆಕೆಯ ಕೂಗು ಈಗಲೂ ನನ್ನ ಕಿವಿಗೆ ಕೇಳಿಸುತ್ತಿದೆ. ನಾಝಿ ಸೈನಿಕರ ಹಠ ಸಂಭೋಗದಿಂದಾಗಿ ರಕ್ತಪಾತವಾಗಿ ಆಕೆಯು ಒಂದೆರಡು ತಾಸುಗಳಲ್ಲೇ ಮಡಿದಳು. ಸೈನಿಕರು ನನ್ನನ್ನು ಅವರ ಖಾಸಗಿ ಮನೆಗೆ ಕರೆದೊಯ್ದರು. ನಾನು ಯೆಹೂದಿಯವಳಾದುದರಿಂದ ಬೀದಿಗಳಲ್ಲಿ ನನ್ನನ್ನು ಎಳೆದುಕೊಂಡು ಹೋಗುವಾಗ ಕೂಡಾ ಯಾರೂ ಮಾತಾಡಲಿಲ್ಲ. ಅಯ್ಯೋ! ಸೈನಿಕರ ಮನೆಯಲ್ಲಿ ನನ್ನ ಪಾಡನ್ನು ಹೇಳಿ ತೀರದು. ಒಂದೇ ದಿನದಲ್ಲಿ ಸುಮಾರು ಅರುವತ್ತು ಮಂದಿ ನನ್ನ ಸೌಂದರ್ಯವನ್ನು ಕೆಡಿಸಿದರು. ನನ್ನ ಕೂಗು ಅವರ ಕಲ್ಲೆದೆಯನ್ನು ಕರಗಿಸಲಿಲ್ಲ. ವನ್ಯಜಂತುಗಳಂತೆ ಅವರು ತಮ್ಮ ಕಾಮದ ಕೊಡವನ್ನು ತುಂಬಿಕೊಂಡರು. ನಾಲ್ಕೈದು ದಿನಗಳಲ್ಲಿ ನಾನೊಂದು ಮರದ ಕೊರಡಿನಂತಾದೆ. 'ಅಸಹಾಯರಿಗೆ ಜಗತ್ತಿನಲ್ಲಿ ಬದುಕುವ ಹಕ್ಕಿಲ್ಲ' ವೆಂಬುದು ನನಗೆ ಆಗ ತಿಳಿಯಿತು. ಸೈನಿಕರು ಕೆಲಸದ ಮೇಲೆ ಹೋದಾಗ ನಾನು ಹೇಗಾದರೂ ತಪ್ಪಿಸಿಕೊಂಡೆ. ನನ್ನಂತಹ ನೂರಾರು ತರುಣಿಯರು ಇಂತಹ ಅತ್ಯಾಚಾರಗಳಿಗೆ ಬಲಿಯಾಗಿದ್ದಾರೆ. ವಕ್ಕೆಯಲ್ಲಿ ನಿರಾಶ್ರಿತರಾಗಿ ಬಳಲುತ್ತಿದ್ದಾರೆ.'

ಪ್ರಾಯಶಃ ಈ ಕರುಣಾಜನಕ ಕತೆಯನ್ನು ಕೇಳಿ ಡ್ರ್ಯಾವರನ ಹೃದಯವು ಕರಗಿರಬೇಕು. ಬಾರೆಂದು ಹೇಳಿ ಆಕೆಯನ್ನು ಮೋಟಾರಿನೊಳಗೆ ಕುಳ್ಳಿರಿಸಿ, ಸಮೀಪದಿಂದ ಒಂದಿಷ್ಟು ಆಹಾರವನ್ನು ತಂದುಕೊಟ್ಟ. ತಿಂದಾದೊಡನೆ ಡ್ರ್ಯಾವರನು ಸ್ವತಃ ಯುವಕನಾದುದರಿಂದ ಆಕೆಯ ಸೌಂದರ್ಯದ ಸವಿಯನ್ನು ಸವಿಯಲು ಹಿಂಜರಿಯಲಿಲ್ಲ! ಗತಿಯಿಲ್ಲದ ಆ ತರುಣಿ ಉಪಾಯವಿಲ್ಲದೆ ತನ್ನ ಶರೀರಸುಖವನ್ನು ಅವನಿಗೆ ಕೊಡಬೇಕಾಯಿತು.'

ಇಂತಹ ಪರಿಸ್ಥಿತಿಯು ಪೆಲೆಸ್ತೈನಿನಲ್ಲಿದೆ. ಇತ್ತೀಚೆಗಿನ ಗಲಭೆಯಿಂದಾಗಿ ಅವರ ಅವಸ್ಥೆಯು ತೀರಾ ಕಠಿನವಾಗಿದೆ. ಒಂದೆಡೆಯಲ್ಲಿ ಯೆಹೂದಿಯರಿಗೆ ಅರಬರ ವಿರೋಧ. ಇನ್ನೊಂದೆಡೆಯಲ್ಲಿ ಬ್ರಿಟಿಷ್ ಸರಕಾರದ ಕಠಿನ ಕಾಯಿದೆಗಳು.

ಅಮೇರಿಕದ ಪ್ರಸಿದ್ಧ ಪತ್ರಿಕೋದ್ಯಮಿಗಳೊಬ್ಬರು 'What I saw in Palestine' ಎಂಬ ಲೇಖನ ಮಾಲೆಯಲ್ಲಿ ಯೆಹೂದಿತರುಣಿಯರ ಕುರಿತು ಬರೆಯುತ್ತಾರೆ.

"ಪೆಲೆಸ್ತೈನಿನ ತರುಣರು ಯೆಹೂದಿ ತರುಣಿಯರ ಕಷ್ಟಕಾಲದಲ್ಲಿ ಸಹಾಯ ಮಾಡಲು ನಿಶ್ಚೈಸಿದಂತಿದೆ ಈ ಸುಂದರಿಯರ ಸುಖಕ್ಕಾಗಿ ಅವರು ತಮ್ಮ ಜೀವನವನ್ನು ಕೂಡಾ ಕಡೆಗಣಿಸಿದ್ದಾರೆ. ಮೂರೇ ತಿಂಗಳಲ್ಲಿ ಸಂದರ್ಶಕರು ಪೆಲೆಸ್ತೈನಿನಿಂದ ಹಿಂದೆ ಹೋಗಬೇಕೆಂಬ ಕಾನೂನಿರುವುದರಿಂದ ಎಲ್ಲೆಡೆಗಳಲ್ಲಿಯೂ ಹೊಡೆದೋಡಿಸಲ್ಪಡುವ ಯೆಹೂದಿಯರಿಗೆ ಆಶ್ರಯ ಕೊಡಲು ಆ ತಗುಣರು ಅವರನ್ನು ಮದುವೆಯಾಗುತ್ತಿದ್ದಾರೆ. ಪೆಲೆಸ್ತೈನಿನ ನಿವಾಸಿಗಳಿಗೆ ಮದುವೆಯಾದವರನ್ನು ಹೊರಗೆ ಕಳುಹಿಸುವುದು ಕಾಯಿದೆಗೆ ವಿರೋಧವಾದುದರಿಂದ ಎಷ್ಟೋ ಸುಂದರಿಯರು ಈ ಸವಲತ್ತನ್ನು ಏಕಪ್ರಕಾರವಾಗಿ ಉಪಯೋಗಿಸುತ್ತಿದ್ದಾರೆ. ಈ ಮದುವೆಗೆ ಪ್ರೇಮದ ಪ್ರಶ್ನೆಯೇ ಇಲ್ಲ.

## ಒಂದು ರಾತ್ರಿಯ ಮದುವೆ!

ಎಷ್ಟೋ ತರುಣರು ಯೆಹೂದಿ ತರುಣಿಯರನ್ನು ಮದುವೆಯಾಗಿ ಒಂದು ರಾತ್ರಿ ಅವರೊಡನೆ ಸಂತೋಷಪಟ್ಟು ಮರುದಿನ ಅವರನ್ನು ಬಿಟ್ಟು ಬಿಡುತ್ತಾರೆ. ಮದುವೆಯ ಪೌರೋಹಿತ್ಯವನ್ನು ಕೆಲವು "ರಬ್ಬಿ"ಗಳು ವಹಿಸುತ್ತಾರೆ. ಇಪ್ಪತ್ತನಾಲ್ಕು ತಾಸುಗಳೊಳಗೆ ರಬ್ಬಿಯೇ ವಿವಾಹವಿಚ್ಛೇದನೆಗೆ ಸಮ್ಮತಿಯನ್ನು ಕೂಡಾ ಕೊಡುತ್ತಾನೆ.

## "ವ್ಯಭಿಚಾರ ಲೇಸು!"

ಪ್ರೇಮವನ್ನು ಲೆಕ್ಕಿಸದೆ ಸಿಕ್ಕಿದವರನ್ನು ಮದುವೆಯಾಗಿ ಒಂದೆರಡು ದಿನಗಳ ತನಕ ತಮ್ಮ ತನುವನ್ನು ಅವರ ಆನಂದಕ್ಕಾಗಿ ಮಾರುವುದು ಸರಿಯೇ ಎಂಬುದಕ್ಕೆ ಯೆಹೂದಿ ತರುಣಿಯರೇ ಉತ್ತರವಿತ್ತಿದ್ದಾರೆ. ಜರ್ಮನಿ ಇಟಲಿಗಳಲ್ಲಿ ಯೆಹೂದಿ ತರುಣಿಯರನ್ನು ನಾಝಿ, ಮತ್ತು ಫ್ಯಾಸಿಸ್ಟ್ ಸೈನಿಕರು ಸಿಕ್ಕಾಬಟ್ಟೆ ಹಿಂಸಿಸಿ, ಪ್ರಾಣಿಗಳಂತೆ ಅವರೊಡನೆ ಭೋಗಿಸಿ ಕೆಡಿಸುವುದರಿಂದ ಪೆಲೆಸ್ತೈನಿನಲ್ಲಿ ಈ ತರದ ಮದುವೆಯಾಗಿ ಜೀವಿಸುವುದು ಲೇಸೆಂದು ಅವರ ಹೇಳಿಕೆಯಾಗಿದೆ. ಪೆಲೆಸ್ತೈನಿನಲ್ಲಿ ನಾನು ಅನೇಕ ತರುಣಿಯರೊಡನೆ ಈ ವಿಚಿತ್ರ ವಿವಾಹಗಳ ಕುರಿತು ಕೇಳಿ

ದಾಗ "ಒಂದೇ ರಾತ್ರಿಯ ಸುಖವಾದರೂ ನವಾಗದರಲ್ಲಿ ಪೂರ್ಣ ಸಮಾಧಾನವಿದೆ"ಯೆಂದು ಅವರು ಹೇಳಿದ್ದಾರೆ.

### "ಗಂಡ ಬೇಕಾಗಿದೆ"

ಹೈಫಾ ಬಂದರಕ್ಕೆ ಹೋಗಿದ್ದೆ. ಒಬ್ಬ ಯೆಹೂದಿ ಸುಂದರಿಯು ಕೂಗುತ್ತಿದ್ದುದನ್ನು ಕಂಡೆ. ಮುದಿ ನಾವಿಕನೊಬ್ಬನು -"ಹೇ, ಈ ಯೆಹೂದಿ ಹುಡುಗಿಯೊಡನೆ ಪಾಸ್ ಪೋರ್ಟಿಲ್ಲ ದಾರಾದರೊಬ್ಬ ಗಂಡ ಸಿಕ್ಕಿ 'ಒಂದು ರಾತ್ರಿ'ಯ ಮದುವೆಯಾಗಬೇಕಾಗಿದೆ; ಒಬ್ಬ ಗಂಡನನ್ನು ಹುಡುಕೊಡಿ' ಎಂದು ಹೇಳಿದ್ದನ್ನು ಕೇಳಿ ನಗುವೂ ಬೇಸರವೂ ಒಮ್ಮೆಗೇ ನನಗೆ ಬಂದು ಬಿಟ್ಟಿತು.

"ಕೂಡಲೆ ಸಮೀಪದಲ್ಲಿದ್ದ ಒಬ್ಬ ಡ್ರ್ಯಾವರನನ್ನು ನಾವಿಕನೊಬ್ಬ ಕರೆದುಕೊಂಡು ಬಂದನು ಧಕ್ಕೆಯಲ್ಲಿ ಡ್ರ್ಯಾವರನೊಂದಿಗೆ ಆ ಹುಡುಗಿಯ ಮದುವೆಯನ್ನು ಒಬ್ಬ ರಬ್ಬಿಯು ಮಾಡಿ ತೀರಿಸಿದ. ಮುಂದೇನಾಗುತ್ತದೆಂದು ನಾನು ಅವರ ಹಿಂದೆಯೇ ಹೋದೆ. ಕಾರಿನ ಬಳಿಯಲ್ಲಿ ಆದರ ಯಜಮಾನ ಬಂದಾಗ ಡ್ರ್ಯಾವರನು ತನ್ನೊಡನಿದ್ದ ಯುವತಿಯನ್ನು ತೋರಿಸಿ "ನನ್ನ ಹೊಸ ಹೆಂಡತಿ"ಯೆಂದು ಹೇಳಿದ. ಯಜಮಾನನು ನಕ್ಕು ಮೋಟಾರಿನೊಳಗೆ ಕುಳಿತು ಕೊಳ್ಳಲು ಹೇಳಿ ಅವರು ಮೂವರೂ ತೆರಳಿದರು. ಮೂರು ವರುಷಗಳ ಬಳಿಕ ನಾನಾಕೆಯನ್ನು ಒಂದು ಬೀದಿಯಲ್ಲಿ ಕಂಡೆ. ಭಿಕ್ಷುಕಿಯಂತೆ ರಸ್ತೆಯ ಬದಿಯಲ್ಲಿ ಕುಳಿತಿದ್ದಳು. ಅವಳ ಜವ್ವನದ ಕಲೆಗಳು ಮಾಯವಾಗಿದ್ದುವು. ಇಬ್ಬರು ಮಕ್ಕಳು ಆಕೆಯೊಡನಿದ್ದುವು. ಯೆಹೂದಿಯರ ಪಾಡು ಎಷ್ಟು ಕಠಿನವಾದುದೆಂದು ನನಗೆ ಆಗ ಸ್ಪಷ್ಟವಾಗಿ ತಿಳಿಯಿತು"

### ಜೆರುಸಲೇಮಿನ ಹೊಟೆಲುಗಳಲ್ಲಿ

ಅನೇಕ ಯೆಹೂದಿ ತರುಣಿಯರು ಜೆರುಸಲೇಮಿನ ಹೊಟೆಲುಗಳಲ್ಲಿ ದುಡಿಯುತ್ತಿದ್ದಾರೆ. ಈ ಹೊಟೆಲುಗಳ ಮ್ಯಾಲಿಕರು ಯುರೋಪಿಯಾನರಾದುದರಿಂದ ತನುವಿಕ್ರಯ ಕಾರ್ಯವು ಅಂತಹ ಸ್ಥಳಗಳಲ್ಲಿ ಏಕಪ್ರಕಾರವಾಗಿ ನಡೆಯುತ್ತದೆ. ಹೆಚ್ಚಿನ ತರುಣಿಯರು ಭಯಂಕರ ರೋಗಗಳಿಗೆ ತುತ್ತಾಗಿ ನಾಯಿಗಳಂತೆ ಸಾಯುತ್ತಾರೆ. ಹೊಟೆಲುಗಳಿಗೆ ಬರುವ ಎಷ್ಟೋ ಗ್ರಾಹಕರು ತರುಣಿಯರನ್ನು ರಹಸ್ಯವಾಗಿ ದುಡ್ಡು ಕೊಟ್ಟು ಕೊಂಡುಕೊಳ್ಳುವುದಿದೆ.

### ತರುಣಿಯರ ವಿಕ್ರಯ.

ಪೆಲೆಸ್ಟೈನಿನ ಹಲವೆಡೆಗಳಲ್ಲಿ ಈಗಲೂ ಯೆಹೂದಿ ತರುಣಿಯರು ವಿಕ್ರಯಿಸಲ್ಪಡುತ್ತಿದ್ದಾರೆ. ಇದು ಕಾನೂನಿಗೆ ವಿರೋಧವಾಗಿದ್ದರೂ ಅನೇಕರು ನಿರ್ಭಾಗ್ಯ ತರುಣಿಯರನ್ನು ತಮ್ಮ ಭೋಗ ಸಾಧನಗಳನ್ನಾಗಿ ಉಪಯೋಗಿಸಲು ಕೊಂಡುಕೊಳ್ಳುತ್ತಾರೆ. ಅತ್ಯಂತ ಸಂದರಿಗೆ ೧೦ ಪವನುಗಳಿಗಿಂತ ಹೆಚ್ಚು ಕ್ರಯವಿಲ್ಲ. ಇದರ ರಹಸ್ಯವು ಬ್ರಿಟಿಷ್ ಸರಕಾರಕ್ಕೆ ಇತ್ತೀಚೆಗೆ ತಿಳಿದಿರುವುದರಿಂದ ತರುಣಿಯರ ವಿಕ್ರಯವನ್ನು ನಿಲ್ಲಿಸಲು ತುಂಬಾ ಯತ್ನಗಳಾಗುತ್ತಿವೆ.

### ವ್ಯಭಿಚಾರದ ಅಭಿವೃದ್ಧಿ!

ಪೆಲೆಸ್ಟೈನಿನಲ್ಲಿ ಯುದ್ಧವು ನಡೆಯುತ್ತಿರುವುದರಿಂದ "ಒಂದು ರಾತ್ರಿಯ ವಿವಾಹ"ಗಳು ಏಕಪ್ರಕಾರವಾಗಿ ನಡೆಯುತ್ತಿರುವುದಲ್ಲದೆ ವ್ಯಭಿಚಾರವು ದಿನೇ ದಿನೇ ಹೆಚ್ಚುತ್ತಿದೆ. ನಿರ್ಗತಿಕರಾದ ತರುಣಿಯರನ್ನು ಒಂದುಗೂಡಿಸಿ ಅವರಿಗೆ ಆಹಾರವನ್ನು ಕೊಟ್ಟು, ರಾತ್ರಿ ಹಗಲೆನ್ನದೆ ವ್ಯಭಿಚಾರ ವೃತ್ತಿಯನ್ನು ಮಾಡಿಸಿ ಹಣ ಸಂಪಾದಿಸುವ ಅದೆಷ್ಟೋ ಮಂದಿ ಹೈಫಾ ಮತ್ತು ಇನ್ನಿತರ ನಗರಗಳಲ್ಲಿದ್ದಾರೆ. ಯುದ್ಧಕಾಲವಾದುದರಿಂದ ಇವುಗಳನ್ನು ತಡೆಯುವುದು ಬಹಳ ಕಷ್ಟಸಾಧ್ಯವಾಗಿದೆ.

### ಬೆತ್ಲೆಹೆಲ್ಮ್ ಸ್ತ್ರೀ ಸೆರೆಮನೆ!

ಪೆಲೆಸ್ಟೈನಿನಲ್ಲಿರುವ ಬೆತ್ಲೆಹೆಲ್ಮ್ ಸೆರೆಮನೆಯು ಸ್ತ್ರೀ ಕೈದಿಗಳಿಂದ ತುಂಬಿ ಹೋಗಿರುವುದರಿಂದ ಉಪಾಯವಿಲ್ಲದೆ ಈಗ ಸೈನಿಕರ ವಠಾರಗಳಲ್ಲಿ ಕೈದಿಗಳನ್ನು ಇಡಲಾರಂಭಿಸಿದ್ದಾರೆ. ಸೆರೆಯಾಳುಗಳನ್ನು ಹತೋಟಿಯಲ್ಲಿಡುವುದು ಕೈಮೀರಿದ ಕೆಲಸವಾಗಿರುವುದರಿಂದ ಸೈನಿಕರ ಅತ್ಯಾಚಾರವು ಈಗಾಗಲೆ ಪ್ರಾರಂಭವಾಗಿದೆ. ಬ್ರಿಟಿಷ್ ಸ್ತ್ರೀ ಅಧಿಕಾರಿಗಳು ಸಾಧ್ಯವಾದಷ್ಟು ಮಟ್ಟಿಗೆ ವ್ಯವಸ್ಥೆಯನ್ನುಂಟುಮಾಡಲು ಯತ್ನಿಸುತ್ತಿದ್ದಾರೆ. ಹೇಗಿದ್ದರೂ "ಒಂದು ರಾತ್ರಿಯ ಮದುವೆ"ಗಳು ಪೆಲೆಸ್ಟೈನಿನಲ್ಲಿ ದಿನೇ ದಿನೇ ಹೆಚ್ಚುತ್ತಿರುವುದರಿಂದ ಪರಿಸ್ಥಿತಿಯು ಬಹಳ ಕಠಿನವಾಗಲಿದೆ.

---

## • ನಿಮ್ಮನ್ನು ಹೆದರಿಸುವ ಆ ಜೈಲು! •



# ಛಾಪೆಯಿಂದೇಳುವಾಗ ಢಕಾಯಿತನಾಗಿದ್ದೆ!

**ಢಕಾಯಿತಿನ ತಕ್ಸೀರಿಗೊಳಗಾಗಿ ಏಳು ವರ್ಷ ಕಠಿಣ ಶಿಕ್ಷೆ ಪಡೆದು ಮದ್ರಾಸ್ ಪ್ರಾಂತ್ಯದ ಬೇರೆ ಬೇರೆ ಜೈಲುಗಳಲ್ಲಿದ್ದು ಬಂದವರೊಬ್ಬರ ಆತ್ಮ ಕಥೆಯಿದು.**

**• ಲೇಖಾಂಕ ೧ •**

ಮಹಾಯುದ್ಧದ ಕಾಲದಲ್ಲಿ ಬ್ರಿಟಿಷ್ ಯುದ್ಧಹಡಗೊಂದರಲ್ಲಿ ನಾನು ಕೆಲಸಗಾರನಾಗಿದ್ದೆ. ನಾನು ಚಿಕ್ಕಂದಿನಿಂದಲೂ ಉಗ್ರಸ್ವಭಾವದವನು, ಮುಂಗೋಪಿ. ಇಂತಹ ಸ್ವಭಾವದ ಮಿಕ್ಕವರಂತೆ ನಮ್ಮೂರಿನ ಹಲವರ ವಕ್ರದೃಷ್ಟಿಗೆ ನಾನೂ ಪಾತ್ರನಾಗಿದ್ದೆ. ಮಹಾಯುದ್ಧ ಪ್ರಾರಂಭವಾಯಿತು. ಹಡಗಗಳಲ್ಲಿ ಕೆಲಸ ಮಾಡಲು ಜನರು ಬೇಕಾದರು. ನಮ್ಮೂರಿನಲ್ಲಿ ನನ್ನಂತಹ ಎಳೆ ಹರೆಯದವರು ಬಹುಮಂದಿ ಇದ್ದರು. ಆದರೆ ಯುದ್ಧಕ್ಕೆ ಹೋಗುವದೆಂದೊಡನೆ ಎಲ್ಲರೂ ಹಿಂಜರಿದರು. ಯಾರಾದರೂ ಜೀವಕ್ಕಾಗಿ ಕೆಲಸ ಮಾಡುತ್ತಾರೆ ಹೊರತು ಕೆಲಸಕ್ಕಾಗಿ ಜೀವ ಕೊಡುತ್ತಾರೇಕೆ? ಆದರೆ ನಾನು ಸಂತೋಷದಿಂದ ಕೆಲಸಕ್ಕೆ ಸೇರಿಕೊಂಡೆ. ಯುರೋಪಿನ ಮಹಾಯುದ್ಧದ ಕೊನೆಯ ಭಾಗವದು. ಕಿರಾಹಳ್ಳಿಯಲ್ಲಿದ್ದ ನನಗೆ, ಯುರೋಪಿನ ಹೆಸರಾಂತ ಪಟ್ಟಣಗಳನ್ನು ನೋಡುವ ಸಂದರ್ಭವೊದಗಿತು. ಪ್ರಪಂಚದ ಮಹಾ ಅದ್ಭುತಗಳಾದ ಯುದ್ಧರಂಗದ ಹಲವು ದೃಶ್ಯಗಳನ್ನು ಪ್ರತ್ಯಕ್ಷಕಾಣುವಂತಾಯಿತು. ನಿರ್ಭೀತ ಸ್ವಭಾವದವನಾದ ನನ್ನ ಕಣ್ಣಿಗೆ ಅವೆಲ್ಲಾ ಮಹಾ ವೈಭವಗಳಾಗಿ ಕಂಡವು. ನಾನು ಕೆಲಸಕ್ಕೆ ಸೇರಿದ ಒಂದೂವರೆ ವರ್ಷದಲ್ಲಿ ಮಹಾಯುದ್ಧವು ಮುಗಿಯಿತು. ನಾನು ಊರಿಗೆ ಮರಳಿದೆ.

### ಊರಿನವರ ಆದರ-ಭಂಗ!

ನಾನು ಊರಿಗೆ ಬರುವಾಗ ಹಲವು ವಿಧಗಳಲ್ಲಿ ಒಬ್ಬ ಧೊರೆಯಾಗಿಹೋಗಿದ್ದೆ. ಹಡಗಿನಶಿಸ್ತು, ಅದೂ ಯುದ್ಧಕಾಲದ ಶಿಸ್ತು-ನನ್ನ ರೀತಿ ನೀತಿಗಳಲ್ಲಿ ಮಹತ್ತಾದ ಬದಲಾವಣೆಯನ್ನು ಮಾಡಿತ್ತು. ವ್ಯಕ್ತಿಶಃ ನಾನು ಕಠೋರರೀತಿಯ ಭಕ್ತ. ಆದ್ದರಿಂದ ಹಡಗಿನಲ್ಲಿರುವಾಗ ಸೈನಿಕಶಿಸ್ತನ್ನು ಹೆಗ್ಗಳಿಕೆಯಿಂದ ಪಾಲಿಸುತ್ತಿದ್ದೆ. ಅದು ನನ್ನಲ್ಲಿ ಮನೆಮಾಡಿ ನಿಂತಿತ್ತು. ನನ್ನ ಹಳ್ಳಿಯವರು ನಾನೊಬ್ಬ ಮಹಾಪುರುಷನೆಂದು ಬಗೆಯಹತ್ತಿದರು. ಆ ನರಮೇಧ ನಡೆಯುವಲ್ಲಿ—ಬಾಂಬು ವಿಷಗಾಳಿ ಬೀಳುವಲ್ಲಿ-ಎಷ್ಟೋ ಸಾವಿರಮೈಲು ದೂರದಲ್ಲಿ ಇದ್ದು ಬಂದ ನನ್ನನ್ನು ಊರವರು ಬಹಳವಾಗಿ ಗೌರವಿಸಹತ್ತಿದರು. ನಾನು ಅವರಿಗೆ ಯುದ್ಧದ ಭಯಂಕರ ಕತೆಗಳನ್ನು ಹೇಳುವದಿತ್ತು. ಹಡಗಿನಲ್ಲಿರುವಾಗ ನನ್ನ ಗಂಟನ್ನು ಹೆಕ್ಕಲು ನಾನೊಮ್ಮೆ ಬಗ್ಗಿರುವಾಗಲೇ ಗುಂಡೊಂದು ರುಂಯನೆ ಕಂಕುಳಿನೊಳಗಿಂದ ಹಾರಿಹೋದುದು-ಸಬ್‌ಮೆರೀನೊಂದು ಮೀನಿನೋಪಾದಿಯಲ್ಲಿ ಅಡಿಯಿಂದಲೇ ಬಂದು ಸುರುಕ್ಕನೆ ಕೊಕ್ಕನ್ನು ನಮ್ಮ ಹಡಗಕ್ಕೆ ಸುರಿದು ಓಡಿಹೋದುದು. ಆಗಲೇ ಒಂದು ಬಾವಿಯಬಾಯಿಯಷ್ಟಗಲಕ್ಕೆ ತೂತುಬಿದ್ದು ಗುಳು ಗುಳು ಗುಳು ಗುಳು ಎಂದು ನೀರು ಹೊಕ್ಕು ಐದೇ ಮಿನಿಟುಗಳಲ್ಲಿ ಗುಳಮ್ಮನೆ ಹಡಗು ಮುಳುಗಿದುದು-ಎಲ್ಲರೂ ದಡಬಡನೇ ನೀರಿಗೆ ಹಾರಿದಾಗ ನಾನೊಂದು ರಬ್ಬರ್ ಚೆಂಡನ್ನು ಕಟ್ಟಿಕೊಂಡು ಹಾರಿದುದು-ಹಾರಿದ ೨೩ ಘಂಟೆಗಳ ನಂತರ-ಕೈಕಾಲು ಮೊದಲೇ [illegible]

ದ್ದರೂ ಆ ಚೆಂಡಿನಬಲದಿಂದ-ಹೋಗಿ ದಡಕ್ಕೆ ಬಿದ್ದುದು-ಇವನ್ನೆಲ್ಲಾ ಹಾವಭಾವ ನಟನೆಯೊಡನೆ ನಾನು ವರ್ಣಿಸುತಿದ್ದೆ. ಕಣ್ಣು ಕಿವಿಯರಳಿಸಿ ಕೆಲವರು-ಭೂತಬಡಿದವರಂತೆ ಮರಗಟ್ಟಿ ಕೆಲವರು-ಹಾರಿಹಾರಿ ಕುಣಿದು ಕೆಲವರು-ನನ್ನ ಕತೆಗಳನ್ನು ಆ ಹಳ್ಳಿಗರು ಕೇಳುತ್ತಿದ್ದರು. ಬಾಯಿಯಿಂದ ಬಾಯಿಗೆ ವರ್ಗಾಯಿಸಲ್ಪಟ್ಟು ಆ ಕತೆಗಳು ಊರುತುಂಬಾ ಪ್ರಚಾರವಾಗಿದ್ದವು. ಹಳ್ಳಿಯ ಕಟ್ಟಹುಣಿಯಲ್ಲಿ ಕೂಡ ನಾನು ಸೈನಿಕ ಹೆಜ್ಜೆಯನ್ನಿಡುತ್ತಿದ್ದಾಗ, ಆಸುಪಾಸಿನವರೆಲ್ಲಾ ನನ್ನನ್ನೇ ನೋಡುವದಿತ್ತು. ಆ ಕಾಲದಲ್ಲಿ ನಮ್ಮೂರಿನ ಮಕ್ಕಳು ಎಡವಿಬಿದ್ದ ಸಂಖ್ಯೆಗಳಲ್ಲಿ, ಸೇಕಡಾ ೯೯ರಷ್ಟು ನನ್ನಂತೆ ನಡೆಯಲು ಅವು ಪ್ರಯತ್ನಿಸಿ ಹೊಂದಿದ ಅವಘಡಗಳಾಗಿದ್ದವು! ಆ ವರೆಗೂ ಊರಿನ ಧಾಂಡಿಗನೆನಿಸಿದ್ದ ಬೊಗ್ಗುಹ್ಯೊಲಿಯೆಂಬವನೊಮ್ಮೆ ಏನೋ ಸ್ವಲ್ಪ ಹೆಮ್ಮೆ ತೋರಿಸಿದನೆಂದು 'ಷಟಾರೆಂದು ಕೆನ್ನೆಗೇರಿಸಿ, 'ನೋಡು! ಈ ಎದೆಯ ಕಲೆ ಯಾವುದರದು ಗೊತ್ತೆ? ಜರ್ಮನ್ ಸಿಪಾಯಿಗಳ ಗುಂಡಿನದು' ಎಂದು ನಾನು ಅಂಗಿಯಗುಂಡಿ ತಪ್ಪಿಸಿ ಹೇಳಿದಾಗ ಬೊಗ್ಗುನ ಕೈಬಾಯಿ ಬಿತ್ತು; ಅವನ ಬದಲಿಗೆ ಕೂಡಿದವರು ಕ್ಷಮೆ ಕೇಳಿದರು!

**ನಮ್ಮೂರಿನ ಮತ್ತೊಂದು ವಿಶೇಷ.**

ಹೀಗೆ ನಮ್ಮ ಹಳ್ಳಿಯಲ್ಲಿ ನಾನೊಂದು ಮಹಾವಿಶೇಷವಾಗಿದ್ದೆ. ಊರವರ ಭಯಾದರಗಳಿಗೊಳಗಾಗಿದ್ದೆ. ಇಂತಹ ಮತ್ತೊಂದು ವಿಶೇಷವೆಂದರೆ........ಮಾಸ್ತರರ ಮನೆ. ಮತ್ತೇನೂ ಇಲ್ಲ, ಅವರು ಸ್ವಲ್ಪ ಹಣಮಾಡಿದ್ದರು. ಮನೆಯಲ್ಲಿ ಅಣ್ಣತಮ್ಮಂದಿರು ಮೂವರು, ಅವರ ಅತ್ತೆಯೊಬ್ಬಳು, ದೊಡ್ಡ ಸಹೋದರರಿಬ್ಬರ ಹೆಂಡತಿಯರಿಬ್ಬರು- ಇಷ್ಟೇ ಮಂದಿ. ಅಧ್ಯಾಪಕರ ತಮ್ಮಂದಿರಿಬ್ಬರೂ ಸರ್ರೀಕೆಲಸಮಾಡುವವರು- ಉಪಾಧ್ಯಾಯರು ಸಂಬಳದಲ್ಲಿ ಚಿಕ್ಕಾಸು ಖರ್ಚುಮಾಡುವವರಲ್ಲ- ಅವರ ಪೂರ್ವಿಕರು ಸ್ವಲ್ಪ ಉಳಿಸಿ ಕೊಟ್ಟದ್ದು ಬೇರೆಯಿತ್ತು-ಹೀಗಾಗಿ ಅವರ ಮನೆಯಲ್ಲೊಂದು ಗಂಟಿದೆಯೆಂದು ಊರವರೆಲ್ಲಾ ಹೇಳುತ್ತಿದ್ದರು. ಐದುಸಾವಿರ ರೂಪಾಯಿಗಳೆಂದು ಕೆಲವರು. 'ಇಲ್ಲಪ್ಪಾ! ಏನಾದರೂ ಐನೂರಾದೀತೆಂದು ಇನ್ನು ಕೆಲವರು – ಒಬ್ಬೊಬ್ಬರು ಒಂದೊಂದು ವಿಧದಿಂದ ಲೆಕ್ಕ ಹಾಕಿ ಹೇಳುತ್ತಿದ್ದರು. ಅಂತೂ ನಮ್ಮೂರಲ್ಲಿ ಧನಿಕರು ಅವರೇ. ಆದರೆ ಅವರಿಗೆ ಧನಬಲವಿದ್ದಷ್ಟು ಜನದೊಲವಿರಲಿಲ್ಲ. ಮೂವರು ಸಹೋದರರೂ ಶಾಂತಸ್ವಭಾವದವರು, ಊರವರ ಗೋಜಿಗೆ ಹೋಗುವವರಲ್ಲ. ಒಂದು ಮುಂದಿನ ಆಲೋಚನೆ ಮಾಡಿಕೊಂಡು, ಸಾಕಷ್ಟು ಜಾಗ್ರತೆ ತೆಗೆದುಕೊಂಡು ಕೆಲವರಿಗೆ ಸಾಲಕೊಟ್ಟಿರಬಹದು- ಆದರೆ ಹಲವರನ್ನು ನಿರಾಶೆ ಪಡಿಸಿದ್ದುಂಟು. ಕೊಡದಿದ್ದ ಕಾರಣ ಯಾವುದಿದ್ದರೂ ಉಪಾಧ್ಯಾಯರು ಮುಂದೊಡ್ಡುತ್ತಿದ್ದ ಕಾರಣ 'ಹಣವಿಲ್ಲ' ಎಂಬುದು. "ಇದ್ದೂ ಇಲ್ಲಾ ಅಂದುಬಿಟ್ಟರು! ಎಂದು ನಮ್ಮೂರಿನ ಹಲವರು ಆಗಾಗ ಹೇಳುವದಿತ್ತು.

> **'ಭೀಕರ ಕೃತ್ಯಗಳ ಗಣ್ಯವಿಲ್ಲದವ ನಾನು' ಎಂಬುದನ್ನು ಊರವರಿಗೆ ನನ್ನ ಮರ್ಜಿಯಿಂದ ತೋರಿಸಿಕೊಟ್ಟಿದ್ದೆ. ಹೀಗಾಗಿ ಊರಲ್ಲಿ ನಡೆದ ಒಂದು ಭೀಕರ ಕೃತ್ಯವು ನನ್ನದಾಗಿ ಹೋಯಿತು! ನಿಮ್ಮಾಣೆ ಇಡುತ್ತೇನೆ —ನಾನು ಆ ದಿನ ರಾತ್ರಿ ಮನೆಯಲ್ಲಿ ಚಾಪೆ ಹಿಡಿದವ ಬೆಳಿಗ್ಗೆ ಎದ್ದಿದ್ದೆ ಮಾತ್ರ!**

**ಹಾಲಕ್ಕಿ ನರ್ಸಣ್ಣ**

೧೯೩೬ನೇ ಇಸವಿಯ ಮಾತು. ಒಬ್ಬ ಹಾಲಕ್ಕಿ ನರ್ಸಣ್ಣ ಬಂದು ನಮ್ಮೂರಿನ ಒಳರಸ್ತೆಯ ಬದಿಯ ಬಯಲಲ್ಲಿ ಢೇರೆಹೊಡೆದಿದ್ದ ನಮ್ಮೂರಿನ ಯಾರಾದರೊಬ್ಬರ ಮನೆಯಲ್ಲಿ ಬೆಳಿಗ್ಗೆ ಏಳುವಾಗಲೇ ಬುಡುಬುಡಿಕೆಯ ಸ್ವರ ಕೇಳುವ ಪದ್ಧತಿ. ಮನೆಯ ಮಕ್ಕಳು ನೆರೆಮನೆಗೋಡಿದರೆ ನರ್ಸಣ್ಣ ಬಂದನೆಂದು ನಮಗೆ ಗೊತ್ತು. ಸುಮಾರು ಒಂದು ವರು

ಷದ ವರೆಗೆ ಅವ ಅಲ್ಲಿಂದ ಢೇರೆ ಕೀಳಲಿಲ್ಲ. ಹಗಲಿನಲ್ಲಿ ಹೊರಗಿನ ಊರುಗಳಿಗೆ ಹೋಗುತ್ತಿದ್ದನಾದರೂ ರಾತ್ರಿ ತಪ್ಪದೆ ಬಿಡಾರಕ್ಕೆ ಬರುತ್ತಿದ್ದ. ಉದ್ದ ಮೀಸೆ, ಕೆಸರು ಕಣ್ಣು, ಗಂಭೀರ ಮುಖ. ಶರ್ಟು ಕೋಟುಗಳಿಂದು ಮೈಮೇಲೆ ನಾಲ್ಕೈದು ಬಣ್ಣದ ತೊಡಿಗೆ, ಉದ್ದ ಮುಂಡಾಸಿನಲ್ಲಿ ನೇತಾಡುವ ಹಕ್ಕಿಗಳ ಗರಿಯ ಬಣ್ಣಬಣ್ಣದ ಗೊಂಡೆ-ಇಂತಹ ಬಗೆಬಣ್ಣದ ಮೂರ್ತಿ ನರ್ಸಣ್ಣ! ಮನೆಯ ಹೆಂಗಸರು ಅಳುವ ಮಗುವನ್ನೆತ್ತಿ ಇಗೋ' ಕೊಂಡುಹೋಗು' ಎಂದು ಅವನಿದಿರು ಎತ್ತಿದೊಡನೆ ಮಗು ಅಳುವುದನ್ನು ಬಿಟ್ಟು ತಾಯಿಯ ಕಂಠ ತಬ್ಬಿಕೊಳ್ಳುತ್ತಿತ್ತು.

'ಇಂದಿನಿಂದ ಆರು ತಿಂಗಳೊಳಗೆ. . ಗುಢುಂ. . ಗುಢುಂ. ., ಠೆಂಕ್ ಮನೆಯ ದಕ್ಷಿಣ ಭಾಗದಲ್ಲಿ. . ಠೆಂಕ್ ಠೆಂಕ್ ಠೆಂಕ್ . . ಗುಢುಂ ಢುಢುಂ . . . ಬಹುದೊಡ್ಡ ಬೊಬ್ಬೆಯೇಳಲಿಕ್ಕಿದೆ ದೇವು. . . ಠೆಂಕ್ ಠೆಂಕ್ . . ಹೇಳಿ ನಿಲ್ಲಿಸಿದೊಡನೆ ಹೆಂಗಸರು ಮಕ್ಕಳುಕೂಡಿ 'ಮಕ್ಕಳಿಗೊಂದು ಹೇಳೊ' ಎನ್ನುವರು. ನರ್ಸಣ್ಣ ಬುಡುಬುಡಿಕೆಯೆತ್ತಿ ನಗುತ್ತಾ "ರೊಟ್ಟಿ ಬೇಕೆಮಕ್ಕಳಿಗೆ| ಪೆಟ್ಟು ಬೇಕೊ ಮಕ್ಕಳೆ| . . . ಠುಂ ಠುಂ ಠುಂ." ಮಾಡಿ ಮಗುವಿನೆಡೆಗೆ ಕೈ ಚಾಚುವನು. ಹೀಗೆ ನರ್ಸಣ್ಣ ನಮ್ಮೂರಿಗೊಂದು ವಿನೋದದಂತಿದ್ದ. . . .ಸೋಜನಿಗೂ ಈ ನರ್ಸಣ್ಣನಿಗೂ ವಿಶೇಷ ಮೈತ್ರಿ. ನರ್ಸಣ್ಣ ಹಲವು ಸಲ ಸೋಜನ ಮನೆಯಲ್ಲಿ ಊಟಮಾಡಿದ್ದ. ಸೋಜನ ಗದ್ದೆಯ ಹುಣಿಯಲ್ಲಿ ಅವರಿಬ್ಬರೇ ಕುಳಿತುಕೊಂಡು ಮಾತಾಡುವುದನ್ನು ಆಗಾಗ ಕಾಣಬಹುದಿತ್ತು. ಒಂದೊಂದು ಸಲ ಸೋಜ ಸ್ವತಃ ನರ್ಸಣ್ಣನ ಢೇರೆಗೆ ಹೋಗಿ ನಡುರಾತ್ರಿಯ ಹೊತ್ತಿಗೆ ಅಲ್ಲಿಂದ ಹಿಂದಿರುಗುವ ವಾಡಿಕೆ. ಹೀಗೆ ಒಂದು ವರುಷದ ವರೆಗೆ ನಮ್ಮೂರಿನಲ್ಲಿದ್ದ ನರ್ಸಣ್ಣ ಒಂದು ದಿನ ಬಿಡಾರ ಎತ್ತಿಕೊಂಡು ಹೋಗಿ ಬಿಟ್ಟಿದ್ದ.

**ನಾನು ಮಾಡಿದವನಲ್ಲ-ಕೇಳಿದವ!**

ಅದು ೧೯೨೭ ನೇ ಇಸವಿಯ ಫೆಬ್ರುವರಿ ಯಾ ಮಾರ್ಚ್ ತಿಂಗಳೆಂದು ನನ್ನ ನೆನಪು. ಪ್ರಾತಃಕಾಲ,

ಸೂರ್ಯನಿನ್ನೂ ಮೂಡಿಲ್ಲ. ನಾನು ಮುಂಚಿನ ರಾತ್ರಿ ಸುಮಾರು ಎಂಟು ಘಂಟೆಗೆ ಮಲಗಿದವ ಚಾಪೆ ಬಿಟ್ಟು ಹೊರಗೆ ಬರುತಿದ್ದೆ. ನನ್ನ ತಾಯಿ ಮತ್ತು ಹೆಂಡತಿ ಎದ್ದು ಮನೆಗೆಲಸದಲ್ಲಿ ತೊಡಗಿದ್ದರು. ಇದಿರಿನ ಬಯಲಿನಲ್ಲಿ ಒಬ್ಬಿಬ್ಬರು ಓಡುವವನ್ನು ಕಂಡೆ. ಎರಡು ಹೆಜ್ಜೆ ಮುಂದೆ ಹೋಗಿ ಅವರು ಓಡುವ ದಿಕ್ಕನ್ನು ನೋಡಿದೆ. ಉತ್ತರ ದಿಕ್ಕಿನ ಕಾಲು ದಾರಿಯಲ್ಲಿಯೂ ನಮ್ಮೂರಿನ ಕೆಲವರು ರಭಸದಿಂದ ಸಾಗುತ್ತಿದ್ದಾರೆ! ಎಲ್ಲರೂ ಪೂರ್ವ ದಿಕ್ಕಿಗೇ ಧಾವಿಸುತಿದ್ದಾರೆ. 'ಏನಿದು?' ಎಂಬುದು ಗೊತ್ತಾಗದೆ ಎರಡು ಮಿನಿಟು ನೋಡುತ್ತಾ ನಿಂತೆ. ಎಲ್ಲರೂ ಓಡುವ ದಿಕ್ಕಿಗ ನಾನೂ ಓಡುವದೆಂಬ ಮನಸಾಯಿತೊಮ್ಮೆ. ಚಾಪೆ ಬಿಟ್ಟು ಎದ್ದಿದ್ದೇನೆ ಮಾತ್ರ. ಮನಸು ತಿಳಿಯಾಗಿತ್ತು, ಮೆದುಳಿಗಾವ ಬಿಸಿಯೂ ಆ ವರೆಗೆ ತಾಗಿದುದಿಲ್ಲ. ಅದರಲ್ಲೂ ನಾನೊಬ್ಬ ಯುದ್ಧಹಡಗದ ಕೆಲಸಗಾರನೆಂಬುದನ್ನು ಮರೆಯಬಾರದು. ಹಲವು ಭಯಂಕರ ದೃಶ್ಯಗಳನ್ನು ಯುರೋಪಿನಲ್ಲಿ ಕಂಡು ಬಂದಿದ್ದ ನನಗೆ–ಊರಿನ ಗಂಡಾಂತರಗಳು ಗಣ್ಯವಲ್ಲ ವೆಂಬುದನ್ನು ತೋರಿಸುವ ಸಲುವಾಗಿ ಊರವರು ಹೇಳುತಿದ್ದ ಎಷ್ಟೋ ವಿಚಿತ್ರ ಘಟನೆಗಳನ್ನು 'ಓಹೊ! ಅಷ್ಟೆ!' ಎಂದು ತಾತ್ಸಾರ ಮಾಡಿಬಿಟ್ಟವ ನಾನು. ಇದಕ್ಕೊಂದು ಓಡುವದೇಕೆ? ಆದ್ದರಿಂದ ಸಿಪಾಯಿಯ ಮರ್ಜಿಯಲ್ಲಿ 'ಊರಿಗೇನಾಯಿತು ನೋಡೋಣ' ಎಂಬ ಠೀವಿಯೊಡನೆ ಅಂಗಳದಲ್ಲೇ ನಿಂತಿದ್ದೆ. ಮನೆಯ ಒಳಗೆ ನೆರಮನೆಯ ತಾಯಿ ನಮ್ಮ ಹೆಂಗಸರೊಡನೆ ಏನನ್ನೊ ಅವಸರವಸರದಿಂದ ಗೊಣಗುತ್ತಿರುವುದು ಕೇಳಿತು. ಎರಡು ಮಿನಿಟುಗಳಲ್ಲಿ ತಾಯಿ ಹೊರಗೆ ಓಡಿ ಬಂದರು. ಉಬ್ಬಸ ಬಿಡುತ್ತಾ "ಮಾಸ್ತರರ ಮನೆಯ ವರ್ತಮಾನ ಕೇಳಿದಿಯಾ?" ಎಂದರು. "ಇಲ್ಲ. ಏನಾಯಿತು?", ನಾನು ಆತುರದಿಂದ ಕೇಳಿದೆ. "ನಿನ್ನೆ ಎಂಟ್ಹತ್ತು ಮಂದಿ ಮನೆಹೊಕ್ಕು ಅವರೆಲ್ಲರ ತಲೆಯೊಡೆದು ಹಾಕಿದ್ದಾರಂತೆ! ದುಡ್ಡಿನ ಪೆಟ್ಟಿಗೆ ಹೊತ್ತುಕೊಂಡು ಹೋಗಿದ್ದಾರಂತೆ! ಹೆಂಗಸರ ಮೇಲೂ ಬಲಾತ್ಕಾರ ಮಾಡಿದ್ದಾರಂತೆ! ದೇವಾ! ಎಂಥಾದ್ದಿದು? ಈ ಊರಿನಲ್ಲಿನ್ನು ನಿಲ್ಲುವುದು ಹೇಗೆ ದೇವರೆ! ..." ಅಮ್ಮ ಚೀರಾಟಕ್ಕೆ ತೊಡಗಿದರು. ಅಷ್ಟರಲ್ಲಿ ಮಾಸ್ತರರ ಮನೆಗೆ ಹೋದ ನೆರೆಮನೆಯ ಮೆಂಡೋಸರು ಹಿಂತಿರುಗಿ ಬರುವವರು ಸೀದಾ ನಾನಿದ್ದಲ್ಲಿಗೇ ಬಂದರು. ನನಗೆ ಆತುರ ತಡೆಯಲಾಗಲಿಲ್ಲ. "ಏನದು? ಮಾಸ್ತರರ ಮನೆಯ ಸಮಾಚಾರ" ಎಂದೆ. ಮೆಂಡೋಸರು ನನ್ನ ಮುಖವನ್ನೇ ಎರಡು ಮಿನಿಟುಗಳ ವರೆಗೆ ನೋಡುತ್ತ ನಿಂತರು. ನನ್ನ ಮುಖದಲ್ಲಿದ್ದುದು ವಾರ್ತೆ ಕೇಳಬೇಕೆಂಬ ಆತುರದ ಚಿಹ್ನೆ ಮಾತ್ರ. ಅದು ಮಕ್ಕಳಿಗೂ ಅರ್ಥವಾಗುವಷ್ಟು ಸ್ಪಷ್ಟವಿತ್ತು. ಮೆಂಡೋಸರು ಹೇಳಲಾರಂಭಿಸಿದರು.

### ಭಯಂಕರ ಢಕಾಯುತಿ!

"ಏನು ಹೇಳುವದು-ಯಾರನ್ನು ನಂಬುವದು? ಇನ್ನು ಈ ಊರಿನಲ್ಲಿ ಹೇಗೆ ಬಾಳುವದು?" ಮೆಂಡೋಸರು ಪೀಠಿಕೆಯಾರಂಭಿಸಿ ನಿಟ್ಟುಸಿರುಬಿಟ್ಟರು. "ನಿನ್ನೆ ಮಾಸ್ತರು ಪೇಟೆಗೆ ಹೋದವರು ಬರಲಿಲ್ಲವಂತೆ. ಮನೆಯಲ್ಲಿ ಅವರ ಇಬ್ಬರು ತಮ್ಮಂದಿರು. ಮಾಸ್ತರರ ಮತ್ತು ಅವರ ತಮ್ಮನ ಹೆಂಡಂದಿರು, ಅತ್ತೆ-ಇಷ್ಟೇ ಜನರಿದ್ದರು. ಸುಮಾರು ಹನ್ನೊಂದು ಘಂಟೆ ಸಮಯಕ್ಕೆ ಎಂಟು ಹತ್ತುಮಂದಿ ಬಂದು ಕೊಡಲಿಯಿಂದ ಬಾಗಿಲು ಒಡೆದು ಒಳನುಗ್ಗಿದರಂತೆ. ಮೊದಲು ಮಾಸ್ತರರ ತಮ್ಮಂದಿರ ತಲೆಗೊಂದೊಂದು ಏರಿಸಿ ಕಂಭಕ್ಕೆ ಬಿಗಿದು ಕಟ್ಟಿದರು. ಅವರು ಪಾಪದವರಲ್ಲವೆ? ಬಾಯಿಗೆ ವಸ್ತ್ರದ ಚಂಡು ತುರುಕಿಸಿಟ್ಟಾಗ ಕೂಗುವದಾದರೂ ಹೇಗೆ? ಇದನ್ನು ನಮ್ಮಂಥವರು ಹೇಳಬಾರದು-ಏಳೆಂಟು ಜನ ಕೂಡಿ ಆ ಇಬ್ಬರು ಹೆಂಗಸರನ್ನೂ ಕೆಡಿಸಿಯೇ ಬಿಟ್ಟಿದ್ದು ಮಾರಾಯಾ! ಆ ಮಾಸ್ತರರ ಹೆಂಡತಿ ಜೀವದ ಹಂಗಿಗಾಗಿ ಹೇಗೋ ಓಡಿಹೋಗಿ ಪಕ್ಕದ ಮನೆಯವರ ಬಾಗಿಲಲ್ಲಿ ಬಿದ್ದವಳಿಗೆ ಸ್ಮೃತಿಯೇ ಇಲ್ಲ! ಹಣದಪೆಟ್ಟಿಗೆ ಎತ್ತಿಕೊಂಡು ಹೋಗಿದ್ದಾರೆ! ಬಂದವರೆಲ್ಲಾ ಮುಖ, ಕೈಕಾಲುಗಳಿಗೆ ಕಪ್ಪುಬಣ್ಣಗಳನ್ನು ಬಳಿದುಕೊಂಡಿದ್ದರಂತೆ. ಈಚೆ ಮನೆಯ ಒಬ್ಬಿಬ್ಬರು ಶಬ್ದಕೇಳಿ ಹೋದರಂತೆ. ಹಾದಿಯಲ್ಲಿಯೇ ಕೆಲವರು ನಿಂತುಕೊಂಡು ದೊಡ್ಡದೊಡ್ಡ ಕಲ್ಲು ಹೊತ್ತುಹಾಕುತ್ತಿದ್ದುದರಿಂದ ಅವರೋಡಿಬಿಟ್ಟರು! ಎಂಥಾ ಭಯಂಕರ ನೋಡು!" ಎನ್ನುತ್ತಾ ಮೆಂಡೋಸರು ಪುನಃ ನನ್ನನ್ನೇ ನೋಡಲಾರಂಭಿಸಿದರು.

"ಅದಿರಲಿ, ಇದು ಯಾರಕೆಲಸ? ಊರಿನವರದೋ ಹೇಗೆ?" ನಾನು ಕೇಳಿದೆ. ಅವರು ಸಂಶಯಗೊಂಡು "ಊರವರಲ್ಲದೆ ಮತ್ತ್ಯಾರು? ಅಲ್ಲಿ

ಹಣವುಂಟೆಂದು ಹೊರಗಿನವರಿಗೇನು ಗೊತ್ತು?...... ಇರಲಿ... ನಿ... ನಿನಗೇನೂ ಈ ಸಂಗತಿ ಗೊತ್ತಿಲ್ಲವಲ್ಲ?''

ನಾನು ಬೆಚ್ಚಿಬಿದ್ದು 'ಹಾಗಂದರೆ?' ಎಂದೆ. ''ಏನೂ ಇಲ್ಲ. ಅದರಲ್ಲಿ ಗುಟ್ಟೇನು? ಹೇಗೂ ಬೆಳಕಿಗೆ ಬರುತ್ತದಲ್ಲ! ಅಲ್ಲಿ ಕೂಡಿದವರೆಲ್ಲ ನಿನ್ನಮೇಲೂ ಅನುಮಾನಪಟ್ಟಿದ್ದಾರೆ. ನೀನು, ಸೋಜ, ಮತ್ತು ಅಹಮದ್ ಕೂಡಿ, ಬೇರೆಜನರನ್ನು ಕೂಡಿಸಿ ಕೆಲಸಮಾಡಿದ್ದು ಎಂದು ಅವರ ಅಂದಾಜು. ಮಾಸ್ತರರ ಮನೆಯವರೂ ಹಾಗೆಯೇ ಹೇಳುತ್ತಾರಂತೆ. ಅದಕ್ಕಾಗಿ ಹೇಳಿದೆ ನೋಡು. ಸ್ವಲ್ಪ ಜಾಗ್ರತೆಯಿರಲಿ-ನಿನ್ನ ಮೈಮೇಲೆ ಬಂದಿದೆ ಪ್ರಸಂಗ! ಏನಾದರೂ ಉಪಾಯಮಾಡು!"

ಮೆಂಡೋಸರ ಮಾತು ಮುಗಿಯುವ ಹೊತ್ತಿಗೆ ನಾನು ಸಿಡಿಲು ಬಡಿದಂತಾಗಿಹೋಗಿದ್ದೆ!

"ಏನಿದು? ನನಗೆ ಗೊತ್ತಾದುದೇ ಮೆಂಡೋಸನು ಹೇಳಿ. ನಾನುಮಾಡಿದೆನೆಂಬ ಸುದ್ದಿಯನ್ನು ನಾನೇ ಕೇಳಿ ತಿಳಿಯುವದೆಂದರೆ ಏನಿದದ್ಭುತ! ಇನ್ನು ಪೋಲಿಸಿನವರು ಬಂದು ಏನುಮಾಡುತ್ತಾರೊ? ಕನಸಿನಲ್ಲಿಯೂ ನೆನಸದ ಮಹಾ ಗಂಡಾಂತರವೊದಗಿತಲ್ಲಾ! ಏನು ಮಾಡಲಿ? ಓಡಿಹೋಗೋಣವೆ-ನಾನೇ ತಪ್ಪಿತಸ್ಥನೆಂದಾಗುವದು. ಖಂಡಿತವಾಗಿಯೂ ನಾನುಮಾಡಿದ್ದಲ್ಲವಲ್ಲ-ಏನಾಗುವದೋ ನೋಡೋಣ!"

ನಾನು ಊರವರಿಗೆ ವರ್ಣನೆ ಮಾಡುತ್ತಿದ್ದಷ್ಟು ಸಮೀಪದಲ್ಲಿ ಅಲ್ಲವಾದರೂ, ಯುದ್ಧಕಾಲದಲ್ಲಿ ನನ್ನ ಹತ್ತಿರದಲ್ಲಿ ಬಾಂಬುಗಳು ಬೀಳುವದನ್ನು ಕಣ್ಣಾರೆ ಕಂಡಿದ್ದೆನು. ಆದರೆ ಇಂದು ಪ್ರತ್ಯಕ್ಷವಾಗಿ-ಅಕಸ್ಮಾತ್ತಾಗಿ ನನ್ನಮೇಲೆಯೇ ಬಿದ್ದ ಬಾಂಬಿನಿಂದಾಗಿ ದಂಗು ಬಡಿದುಹೋದೆ! ಏನುಮಾಡುವದೆಂದು ತಿಳಿಯದಾದೆ.

---

**ಬರುವ ವಾರ**

**ದಸ್ತಗಿರಿ, ಪೋಲಿಸ್ ವಿಚಾರಣೆಯ ರಹಸ್ಯ, ಶಿಕ್ಷೆ ಮತ್ತು ಜೈಲು ಪ್ರವೇಶದ ಹೃದಯದ್ರಾವಕ ವರ್ಣನೆಯು ಬರಲಿರುವದು!**

# ಹಿಮಾಲಯದ ಹಿಮ ಜನರಿಗಾಗಿ



## ಭೂತಾನ್ ಸಂಸ್ಥಾನದ ರಾಜರು ಶೋಧನೆ ಮಾಡಲಾರಂಭಿಸಿದರು.



### ಹಿಮರಾಶಿಯ ಮೇಲೆ ಬಹು ದೊಡ್ಡ ಹೆಜ್ಜೆಗಳು !

[ಭೂತಾನಿನ ಒಂದು ಪತ್ರಿಕೆಯಲ್ಲಿ ಪ್ರಕಟವಾದ ಲೇಖನದ ಭಾಷಾನುವಾದ]

ಜಗತ್ತಿನಲ್ಲಿ ಅತ್ಯುನ್ನತ ಭೂಮಿಯಾದ ಭೂತಾನ್ ಸಂಸ್ಥಾನದ ನರೇಂದ್ರರು ಹಿಮಾಲಯದಲ್ಲಿರುವ ಹಿಮಜನರನ್ನು ಕಂಡು ಹಿಡಿಯುವುದಕ್ಕಾಗಿ ಸದ್ಯದಲ್ಲಿಯೇ ಒಂದು ಶೋಧನಾದಳದ ವ್ಯವಸ್ಥೆಗೊಳಿಸಿ, ಹಿಮಾಲಯಕ್ಕೆ ತೆರಳುವವರಿದ್ದಾರೆ. ಈ ಜನರನ್ನು ಕಂಡು ಹಿಡಿಯುವುದಕ್ಕಾಗಿ ಬ್ರಿಟಿಷ್ ಮತ್ತು ಜರ್ಮನ್ ಪರ್ವತಾರೋಹಿಗಳು ಬಹು ವಿಧದ ಯತ್ನ ನಡೆಸಿದರೂ ಅವರು ಜಯಶೀಲರಾಗದೆ ಹಿಂದೆ ಹೋಗಿದ್ದಾರೆ.

**ನಿಗೂಢ ಜನರು!**

ಈ ನಿಗೂಢ ಜನರ ಕುರಿತು ಸ್ವಾರಸ್ಯ ಕತೆಗಳು ಎಲ್ಲೆಡೆಗಳಲ್ಲಿಯೂ ಹೇಳಲ್ಪಡುತ್ತಿವೆ. ಹಿಮ ಜನರು ಹಿಮಾಲಯದ ತುತ್ತ ತುದಿಗೆ ಹೋಗಬಲ್ಲರೆಂದೂ ಅವರಿಗೆ ಅತಿಮಾನುಷ ಶಕ್ತಿಯಿರುವುದೆಂದೂ ನಾಡಿನ ಜನರು ಬಹಕಾಲದಿಂದ ಹೇಳುತ್ತಿದ್ದಾರೆ.

**ಬಹು ದೊಡ್ಡ ಹೆಜ್ಜೆಗಳು!**

ಪರ್ವತಾರೋಹಿಗಳು ಅನೇಕ ಬಾರಿ ಹಿಮರಾಶಿಯ ಮೇಲೆ ಬಹು ದೊಡ್ಡ ಹೆಜ್ಜೆಗಳನ್ನು ಕಂಡಿರುವರೆಂದು ತಿಳಿದು ಬರುತ್ತದೆ. ಅತ್ಯುನ್ನತ ಪರ್ವತಗಳ ಮೇಲಿನ ಹಿಮರಾಶಿಗಳ ಮೇಲೆ ಮನುಷ್ಯರ ಹೆಜ್ಜೆಯು ಕಾಣಿಸಬೇಕಾದರೆ ಅಂತಹ ಜನರು ಇರಲೇಬೇಕೆಂದು ಭೂತಾನ್ ರಾಜರ ಪ್ರತಿಪಾದನೆಯಾಗಿದೆ.

**ಎರಡು ಆರೋಹಣ!**

ಸಮುದ್ರ ಮಟ್ಟದಿಂದ ೨೬,೦೮೦ ಅಡಿ ಎತ್ತರದಲ್ಲಿರುವ ನಂಗಪರ್ವತದಲ್ಲಿ ಎರಡು ಯುರೋಪಿಯನ್ ಪರ್ವತಾರೋಹಿಗಳ ಕೂಟಗಳವರು ಇಂತಹ ಹೆಜ್ಜೆಗಳನ್ನು ಹಿಮರಾಶಿಯ ಮೇಲೆ ಕಂಡಿರುವರೆಂದು ಭೂತಾನ್ ರಾಜರಿಗೆ ಅವರು ತಿಳಿಸಿರುವರಂತೆ.

**ಮಾನಸ ಪರ್ವತದಲ್ಲಿ**

ಕಳೆದ ವರುಷ ಭೂತಾನ್ ಸಂಸ್ಥಾನದ ಹಲವು ಕೂಲಿಗಳು ೨೧,೦೦೦ ಅಡಿ ಎತ್ತರವಿರುವ ಮಾನಸ ಪರ್ವತಾರೋಹಣ ಮಾಡಿದಾಗ ಅವರು ಹಿಮಜನರನ್ನು ಕಂಡಿರುವರೆಂದು ಭೂತಾನ್ ರಾಜರು ವಿಶ್ವಸನೀಯವಾಗಿ ಹೇಳುತ್ತಿದ್ದಾರೆ.

**ಮುಂದರಿಯಲು ಬೆದರಿದರು!**

ಭೂತಾನಿನ ಆ ಬಡ ಜನರು ಹೆದರಿಕೆಯಿಂದ ಹಿಮ ಜನರ ಬಳಿ ಸಾರದೆ, ತಮ್ಮ ಸಂಸ್ಥಾನಕ್ಕೆ ಹಿಂತಿರುಗಿ ಬಂದು ನಡೆದ ಕಥೆಯನ್ನು ಭೂತಾನ್ ರಾಜರಿಗೆ ಹೇಳಿದ್ದಾರೆ. ಭೂತಾನ್ ಮಹಾರಾಜರು ಈ ವಿಚಿತ್ರ ಕಥೆಯನ್ನು ಕೇಳಿ, ಹೇಗಾದರೂ ಮಾಡಿ ಹಿಮಜನರನ್ನು ಕಂಡು ಹಿಡಿಯಲೇ ಬೇಕೆಂದು ನಿಶ್ಚೈಸಿದ್ದಾರೆ.

**ರಾಜರ ಪ್ರಯತ್ನ.**

ಹಿಮ ಜನರ ವಿಚಿತ್ರ ಶಕ್ತಿಯ ಸುದ್ದಿಯನ್ನು ಕೇಳಿರುವ ಮಹಾರಾಜರು ಆ ಜನರ ದೀರ್ಘ ಜೀವನ, ಅವರ ಅತಿಮಾನುಷ ಶಕ್ತಿ, ಸಂಜೀವಿನೀ ಗಿಡಗಳಿರುವ ಸ್ಥಳದ ರಹಸ್ಯ, ಇವೇ ಮೊದಲಾದುವನ್ನು ತಿಳಿಯಲು ಬಹಳ ಆತುರ ಪಡುತ್ತಿದ್ದಾರೆ. ಇವರ ಪರ್ವತಾರೋಹಣವು ಯಶಸ್ವಿಯಾದರೆ ಹಿಮ ಜನರನ್ನು ಇವರು ಕಾಣಬಹುದೆಂದು ನಿರೀಕ್ಷಿಸಲಾಗಿದೆ.

---

# ಅಧಿಕಾರಿ

ಅಧಿಕಾರಿಯೊಬ್ಬನು ತನ್ನ ಅಧಿಕಾರ ಬಲದಿಂದ ಬಡವನ ಮಡದಿಯೊಬ್ಬಳ ಮೇಲೂ ಅಧಿಕಾರ ನಡೆಸಿದ. 'ಜೀವನವನ್ನೇ ಮರೆಯಿಸುವ' ಅವಸ್ಥೆಯೊಂದು ಅವನನ್ನು ಪಾಪದ ಕೂಪಕ್ಕೆ ಸೆಳೆಯಿತು.

●

ಮುದ್ದು ಮಡದಿಯ ನಷ್ಟದಿಂದ ತರುಣನೊಬ್ಬನಿಗೆ ಹುಚ್ಚು ಹಿಡಿಯಿತು. ಸೇಡನ್ನು ತೀರಿಸಿಕೊಳ್ಳಬೇಕೆಂದು ದೃಢ ಪ್ರತಿಜ್ಞೆ ಮಾಡಿದ ಹುಚ್ಚನ ಕಠಿನ ಹೃದಯವನ್ನು ಕರುಣೆಯ ನುಡಿ ಕರಗಿಸಿತು.

●

**ಸೌ| ಬಾಯಮ್ಮಾ ಶಿಂಪಿ** ---- ವನಿತಾಸೇವಾ ಸಮಾಜ, ಧಾರವಾಡ.



“ಅವಳ ಆ ರೂಪ ನನ್ನ ಮನದಲ್ಲಿ ನಟ್ಟಿತು. ಆ ಸುಂದರ ನಡೆ, ಆ ಸೀರೆಯ ಜರಿ, ಇವೆಲ್ಲಾ ನನ್ನ ಹೃದಯವನ್ನು ಸೂರೆಗೊಂಡಿದ್ದುವು”

ಆ ಎರಡು ತಿಂಗಳು ನಾನು ಕಜಣ ಪಾರ್ಕಿನ ಕ್ರಾಸ್‌ರೋಡಿನ ಪಾಯಿಂಟ್ ಡ್ಯೂಟಿಯಲ್ಲಿ ಇದ್ದೆ. ಮುಂಜಾನೆಯಿಂದ ಸಂಜೆಯ ವರೆಗೆ ನಾನು ಆರು ತಾಸು ಕೆಲಸ ಮಾಡಬೇಕಾಗುತಿತ್ತು. ರಸ್ತೆಯಲ್ಲಿ ಬಂದು ಹೋಗುವ ವಾಹನಗಳ ನಿಯಂತ್ರಣವೇ ನನ್ನ ಕೆಲಸವಾಗಿತ್ತು. ಆ ಕ್ರಾಸ್‌ರೋಡು ಮಧ್ಯವರ್ತಿಯ ಸ್ಥಳವಾದ್ದರಿಂದ ಬಂದುಹೋಗುವ ವಾಹನಗಳ ಸಂಖ್ಯೆಯು ಬಹಳವಾಗಿತ್ತು. ಅವುಗಳ ನಿಯಂತ್ರಣದಲ್ಲಿ ನನ್ನ ಕೆಲಸದ ವೇಳೆಯು ಗೊತ್ತಿಲ್ಲದೆ ಹೋಗುತ್ತಿತ್ತು.

ಎಂದಿನಂತೆ ಆ ದಿನವೂ ನಾನು ಸಾಯಂಕಾಲ ಡ್ಯೂಟಿಯ ಮೇಲೆ ಇದ್ದೆ. ಸುಮಾರು ೬||ಘಂಟೆ ಕಾಲಕ್ಕೆ ಒಬ್ಬ ಹುಚ್ಚನು ನಾನಾ ತೆರನಾಗಿ ಮಾತುಗಳನ್ನೂ ಪದ್ಯಗಳನ್ನೂ ಹೇಳುತ್ತ ಆ ಸ್ಥಳದಲ್ಲಿ ಪ್ರವೇಶಿಸಿದನು. ಆದರಿಂದ “ರಹದಾರಿಗೆ” ಆತಂಕವಾಯಿತು. ನಾನು ಆತನನ್ನು ಬೆದರಿಸಿದೆ. ಆಚೆಗೆ ಅಟ್ಟಿದೆ. ಆದರೂ ಆತನು ಅಲ್ಲಿಂದ ಹೋಗದೆ ದಾರಿಯ ಒಂದು ಬದಿಗೆ ನಿಂತು ಹಾಡಲು ಪ್ರಾರಂಭಿಸಿದನು. ಆತನ ವಿಚಿತ್ರ ಹಾಡುಗಳೂ, ಮಾತುಗಳೂ, ಜನರಿಗೆ ಹೊತ್ತು ಹೋಗುವದಕ್ಕೆ ಸಾಧನವಾಗಿದ್ದುವು. ಆ ಹಾಡುಗಳನ್ನು ಕೇಳಿ ದಾರಿಯಿಂದ ಹೋಗುವ “ಪೋಕರಿ” ಹುಡುಗರು ಆತನ ಸುತ್ತಲು ನೆರೆದರು. ಹೀಗಾಗಿ ಆತನದೊಂದು ಸಮ್ಮೇಲನವು ಅಲ್ಲಿ ಪ್ರಾರಂಭವಾಯಿತು ಜನಗಳು ಬಂದ ಹಾಗೆ ಹುಚ್ಚನ ಹುರುಪು ಬೆಳೆಯಿತು. ಆತನು ಮತ್ತಷ್ಟು ಗಟ್ಟಿಯಾಗಿ ಕೂಗ ಹತ್ತಿದನು.

ಅನೇಕ ಅಧಿಕಾರಿಗಳು ಬಂದು ಹೋಗುವ ದಾರಿಯದು. ನಾನು ಆತನನ್ನು ಅಲ್ಲಿ ನಿಲ್ಲಗೊಟ್ಟಿದ್ದರಿಂದ ಅಧಿಕಾರಿಗಳಿಂದ ಬೈಸಿಕೊಳ್ಳಬೇಕಾಗುವದೆಂದು ಬದಿಯ ದಾರಿಯಿಂದ ಹೊರಟು ಹೋಗಲಿಕ್ಕೆ ಹೇಳಿದೆ. ಬೆದರಿಸಿದೆ. ದರ್ಪದ ಮಾತುಗಳನ್ನಾಡಿದೆ. “ಒಳ್ಳೇದು ಬುದ್ಧಿ” ಎಂದು ಆತನು ಅಲ್ಲಿಂದ ಕಾಲ್ದೆಗೆದನು, ಹೊರಟನು. ಗುಂಪು, ಆ ಜನಗಳ ಗುಂಪು ಆತನ ಬೆನ್ನು ಹತ್ತಿತು. ಅಷ್ಟರಲ್ಲಿ 'ಎಕ್ಸ್‌ಟೆನ್‌ಶನ್ ರೋಡಿನಿಂದ' ಒಂದು ನೀಲಿ ಬಣ್ಣದ ಮೋಟಾರು ಬಂದಿತು. ಆ ಮೋಟಾರನ್ನು ಕಂಡು ಆ ಹುಚ್ಚನಿಗೇನು ತಿಳಿಯಿತೋ ಏನೋ! ಒಮ್ಮೆಗೆ ಜಿಗಿದೆದ್ದು “ಈತನೇ ಈತನೇ” ಎಂದು ಕೂಗುತ್ತ ಬದಿಯಲ್ಲಿ ಬಿದ್ದ ದೊಡ್ಡ ಕಲ್ಲು ತಕ್ಕೊಂಡು ಅದೇ ಮೋಟಾರಿನ ಮೇಲೆ 'ಭರ್‍ರೆಂದು' ಬೀಸಿದನು. ಕಲ್ಲಿಂದ ಮೋಟಾರ ಕನ್ನಡಿಗಳು ಒಡೆದವು. ಡ್ರೈವರನು

ಮೋಟಾರು ನಿಲ್ಲಿಸಿದನು. ನಾನು ಓಡುತ್ತ ಮೋಟಾರಿನ ಬದಿಗೆ ಹೋದೆ. ಆ ಮೋಟಾರು ನಮ್ಮ ಡಿ. ಎಸ್. ಪಿ ಯವರದೆಂದು ತಿಳಿಯಲು ನನ್ನ ಕೈಕಾಲುಗಳೇ ಹೋದವು. ಅಧಿಕಾರಿಗಳು ಏನು ಮಾಡುವರೋ ಎಂದು ಹೆದರಿದೆ.

ಕನ್ನಡಿಯೊಡೆದು ಗಾಜಿನ ಚೂರುಗಳು ಡ್ರೈವರನ ಹಣೆಗೂ ಸಾಹೇಬರ ಕೈಗೂ ತಾಗಿದ್ದವು. ನಾನು ಮೊದಲು ಹುಚ್ಚನನ್ನು ಹಿಡಿದು ಕಪಾಳಕ್ಕೆ ಎರಡು ಕೊಟ್ಟು ಸಾಹೇಬರ ಮುಂದೆ ಎಳೆದುಕೊಂಡು ಬಂದು ನಿಲ್ಲಿಸಿದೆ. ಸಾಹೇಬರು ಸುರಿಯುತ್ತಿರುವ ರಕ್ತದ ಕೈಯನ್ನು ಕರವಸ್ತ್ರದಿಂದ ಕಟ್ಟಿಕೊಂಡರು. ಡ್ರೈವರನು ತನ್ನ ಘಾಯ ಕಟ್ಟಲು ನನ್ನ ಕರವಸ್ತ್ರವನ್ನು ಕೇಳಿದನು.

ಅಲ್ಲಿಂದ ಏನೂ ಮಾತನಾಡದೆ ಸಾಹೇಬರು ನನ್ನ ಕಡೆಗೆ ಶೂನ್ಯ ದೃಷ್ಟಿಯಿಂದ ನೋಡಿ 'ನಿನ್ನ ಒಕ್ಕಾಲ ನಂಬರು ಎಷ್ಟು?'' ಎಂದು ಕೇಳಿದರು. ನಾನು ಹೇಳಿದೆ. ಹೆಚ್ಚಿಗೆ ಮಾತನಾಡದೆ ಹೊರಟು ಹೋದರು. ಆದ್ದರಿಂದ 'ಆಯಿತು ನನ್ನ ಅವಸ್ಥೆ' ಎಂದು ಭಾವಿಸಿದೆ. ಅಧಿಕಾರಿಗಳು ಹಾಗೆ ಮಾಡುವುದೆಂದರೆ ನಮ್ಮಂತಹರಿಗೆ 'ಅಪ್ಪಣೆ' ಎಂದರ್ಥವಾಗುತ್ತಿತ್ತು.

ಸುತ್ತಲೂ ನೆರೆದ ಜನರು ಆ ಮೋಟಾರು ಹೋದೊಡನೆ ನನ್ನ ಮೋರೆಯನ್ನು 'ಹುಳು ಹುಳು' ನೋಡ ತೊಡಗಿದರು. ನನಗೆ ಮುಂದೇನು ಮಾಡಬೇಕೆಂಬುದು ತಿಳಿಯಲಿಲ್ಲ.

ಆ ಹುಚ್ಚನನ್ನು ಕೆಲಸ ಮುಗಿದೊಡನೆ ಪೋಲಿಸ್ ಸ್ಟೇಶನಿಗೆ ಎಳೆದುಕೊಂಡು ಹೋದೆ. ಆಗ ಅಲ್ಲಿ ಸಬ್ ಇನಸ್ಪೆಕ್ಟರರು ಇದ್ದರು. ಅವರಿಗೆ ನಡೆದ ಸಂಗತಿಯನ್ನು ಹೇಳಿದೆ. ಅದನ್ನು ಕೇಳಿ ಅವರು ನನಗೆ ಚೆನ್ನಾಗಿ ಬಯ್ದರು. ಹುಚ್ಚನನ್ನು, ಸಾಹೇಬರ ಮೋಟಾರಿಗೆ ಕಲ್ಲು ಒಗೆದ ಹುಚ್ಚನನ್ನು ಲಾಕಪ್ಪಿನಲ್ಲಿ ಹಾಕಲಿಕ್ಕೆ ಹೇಳಿದರು. ನಾನು ಮನೆಗೆ ಹೊರಟು ಹೋದೆ. ಮನಸ್ಸಿನಲ್ಲಿ ಸಮಾಧಾನವಿದ್ದಿಲ್ಲ. ಸಾಹೇಬರು ಒಕ್ಕಾಲ ನಂಬರು ಕೇಳಿದ್ದರಿಂದ ನನ್ನ ಹಲ್ಲಣವು ಹಾರಿ ಹೋಗಿತ್ತು. ಮುಂದೆ ಏನಾಗುವುದೋ ಎಂದು ನಾನು ತುಂಬಾ ಬೆದರಿದ್ದೆ.



"ಎಲ್ಲಾ ನೌಕರಿಗಳಲ್ಲಿ ಪೋಲೀಸ್ ನೌಕರಿಯಂತಹ ಕೆಟ್ಟ ಕೆಲಸವು ಯಾವುದೂ ಇಲ್ಲವೆಂದು ಕೇಳಿದ್ದೆ."

ನಾನು ಪೋಲಿಸ್ ಕೆಲಸಕ್ಕೆ ಸೇರಿ ಬಹಳ ದಿನಗಳಾಗಿದ್ದಿಲ್ಲ. ತುಂಬಾ ಕಲಿತವನು. ಹೊಟ್ಟೆಯ ದೆಸೆಯಿಂದ ನಿರುದ್ಯೋಗದ ಭೀಕರತೆಯ ದೆಸೆಯಿಂದ ಆ ಕೆಲಸವನ್ನು ಮಾಡಬೇಕಾಗಿತ್ತು. "ಎಲ್ಲಾ ನೌಕರಿಗಳಲ್ಲಿ ಪೋಲಿಸ್ ನೌಕರಿಯಂತಹ ಕೆಟ್ಟ ಕೆಲಸವು ಯಾವುದೂ ಇಲ್ಲ'' ವೆಂದು ಕೇಳಿದ್ದೆ. ಆದರೆ...?

ಮನೆಗೆ ಹೋಗುವದರಲ್ಲಿ ಒಂದು ಘಂಟೆಯಾಯಿತು. ಊಟ ಮಾಡಿ ಕುಳಿತು ಕೊಳ್ಳುವಷ್ಟರಲ್ಲಿ ಒಂದು ಬೈಸಿಕಲ್ ಮನೆಯ ಮುಂದೆ ಬಂದು ನಿಂತುಕೊಂಡದ್ದು ಕಂಡಿತು. ಯಾರು ಬಂದರೆಂದು ಹೊರಗೆ ನೋಡಿದೆ. ಬಂದವನು ಒಬ್ಬ ಕಾನ್ಸ್ಟೇಬಲನಾಗಿದ್ದನು. ಆತನು ನನಗೆ 'ರಾವ ಸಾಹೇಬರು (ಸಬ್ ಇನಸ್ಪೆಕ್ಟರರಿಗೆ ಹಾಗೆ ಅನ್ನುತ್ತವಾಡಿಕೆ.) ಕೂಡಲೇ ನಿನ್ನನ್ನು ಕರೆದಿರುವರೆಂದು ಹೇಳಿದನು ಆದ್ದರಿಂದ ಸ್ವಲ್ಪವೂ ತಡೆಯದೆ 'ಡ್ರೆಸ್' ಮಾಡಿಕೊಂಡು ಹೊರಟೆ. ರಾವ್ ಸಾಹೇಬರು ತಮ್ಮ ಮನೆಯಲ್ಲಿದ್ದರು. ಅಲ್ಲಿಯೇ ಹೋಗಿ ಅವರನ್ನು ಕಂಡೆ. ಅವರು-

'ದೇಶಪಾಂಡೆ ಇದೋ ನೋಡು. ಸಾಹೇಬರಿಂದ ಪತ್ರ ಬಂದಿದೆ. ಮುಂಜಾನೆಯ ಅಪಘಾತಕ್ಕಾಗಿ ಕೂಡಲೆ ಕಾಣಬೇಕೆಂದು ಬರೆದಿರುವರು.'

ಅದನ್ನು ಕೇಳಿ ನಾನು ಮತ್ತಷ್ಟು ಗಾಬರಿಯಾದೆ.

ಸಬ್ ಇನ್ಸ್‌ಪೆಕ್ಟರಿಗೆ ನನ್ನ ಪರಿಸ್ಥಿತಿಯು ಪರಿಚಯವಾಯಿತು. "ಹೆದರುವ ಕಾರಣವಿಲ್ಲ. ನಾನು ಹೇಳುತ್ತೇನೆ'' ಎಂದರು.

ನಾನು ಕಲಿತ ಮನುಷ್ಯನಾದ್ದರಿಂದಲೂ ಸಭ್ಯ ಪ್ರಕೃತಿಯವನಾದ್ದರಿಂದಲೂ ಸಬ್ ಇನಸ್ಪೆಕ್ಟರರಿಗೆ ಬೇಕಾದವನಾಗಿದ್ದೆ.

ನಮ್ಮ ಡಿ. ಎಸ್. ಪಿಯವರು ಹಿಂದೀಯ ಮನುಷ್ಯರು. ಇನ್ನೂ ತರುಣರು, ಹೊಸತಾಗಿ ನಮ್ಮೂರಿಗೆ ವರ್ಗವಾಗಿ ಬಂದಿದ್ದರು. ಅವರು

ಟ್ಟಿನ ಪ್ರಕೃತಿಯವರು. ಕಾಯಿದೆ ಪ್ರಿಯರೂ ಆಗಿರುವರೆಂದು ಸುದ್ದಿಯಿತ್ತು. ಸಬ್ ಇನಸ್ಪೆಕ್ಟರರೂ ನಾನೂ ಕೂಡಲೇ ಅವರನ್ನು ಕಾಣಲು ಅವರ ಬಂಗ್ಲೆಗೆ ಹೋದೆವು.

ಅವರ ಬಂಗ್ಲೆಯು 'ಎಕ್ಸ್ಟೆನ್ಶನ್'ನಲ್ಲಿತ್ತು ನಮ್ಮೂರ ಎಕ್ಸ್ಟೆನ್ಶನ್‌ನಲ್ಲಿ ದೊಡ್ಡ ದೊಡ್ಡ ಅಧಿಕಾರಿಗಳು ಇರುವದು ವಾಡಿಕೆಯಾಗಿತ್ತು.

ಬಂಗ್ಲೆಯ ಸಿಪಾಯಿಯು ನಾವು ಬಂದ ಸುದ್ದಿಯನ್ನು ಸಾಹೇಬರಿಗೆ ಹೇಳಿ, ಅವರ ಅಪ್ಪಣೆಯನ್ನು ಪಡೆದುಕೊಂಡು ಬಂದನು. ನಾವು ಒಳಗೆ ಹೋದೆವು. ಮತ್ತೊಬ್ಬ ಮನುಷ್ಯನು ನಮ್ಮನ್ನು ಮಧ್ಯ ಮಂದಿರಕ್ಕೆ ಕರೆದುಕೊಂಡು ಹೋದನು. ಅಲ್ಲಿ ಸಾಹೇಬರು ಒಂದು ಕೋಚಿನ ಮೇಲೆ ಬಿದ್ದುಕೊಂಡು ವೃತ್ತ ಪತ್ರವನ್ನು ಓದುತ್ತಲಿದ್ದರು. ನಾವು ನಮಸ್ಕಾರ ಮಾಡಿದೆವು. ಅವರು ಕುಳಿತು ಕೊಳ್ಳಲು ಸೂಚಿಸಿದರು. ಸಬ್ ಇನಸ್ಪೆಕ್ಟರರೂ ಕುಳಿತು ಕೊಂಡರು. ನಾನು ಹಾಗೆ ನಿಂತಿದ್ದೆ. ಅದನ್ನು ಕಂಡು ಸಾಹೇಬರು ನನಗೂ ಕುಳಿತುಕೊಳ್ಳಲು ಮತ್ತೆ ಸೂಚಿಸಿದರು. ನನಗೆ ಸಂಕೋಚವಾಯಿತು. ದೊಡ್ಡ ಅಧಿಕಾರಿಗಳ ಎದುರು ನನ್ನಂತಹ ಒಬ್ಬ ಪೋಲಿಸನು ಕುಳಿತುಕೊಳ್ಳುವದು ಯೋಗ್ಯವಾಗಲಿಕ್ಕಿಲ್ಲವೆಂದು ತಿಳಿದೆ. ಆದರೆ ಸಾಹೇಬರ ಮಾತು ಕೇಳದಿರುವದೋ?

ಆ ಮೇಲೆ ಸಾಹೇಬರು-

"ನಿನ್ನ ಹೆಸರೇನು" ಎಂದು ಕೇಳಿದರು.

"ದೇಶಪಾಂಡೆ"

"ವಯಸ್ಸು?"

"೨೫ ಆಗಿದೆ."

"ಲಗ್ನವಾಗಿದೆಯೇ?"

"ಇಲ್ಲ"

"ಶಿಕ್ಷಣ?"

"ಬಿ. ಎ. ವರೆಗೆ"

ಸಾಹೇಬರು ಕೇಳಿದ 'ಲಗ್ನವಾಗಿದೆಯೇ' ಎಂಬ ಪ್ರಶ್ನೆಯು ನನಗೆ ಆಶ್ಚರ್ಯವನ್ನುಂಟು ಮಾಡಿತು. ಸಾಹೇಬರು ಹೀಗೇಕೆ ಕೇಳಿರಬಹುದು.?

ಮಾತೇ ಅದು" ಎಂದು ದೀರ್ಘಶ್ವಾಸವೆಳೆದು ಸಾಹೇಬರು ಸುಮ್ಮನಾದರು. ಕೆಲವು ವೇಳೆ ಆದಮೇಲೆ ಮತ್ತೆ ಮಾತಾಡ ತೊಡಗಿದರು.

ನಾವಂತೂ ಏನೂ ತಿಳಿಯದೆ ಸುಮ್ಮನಿದ್ದೆವು.

'ಆ ಮಾತು, ಅಂದಿನ ಆ ಘಟನೆ ನೆನಪಾದರೆ ಇನ್ನೊಮ್ಮೆ ಜುಮ್ಮೆನ್ನುತ್ತದೆ. ನಾನು ಅಧಿಕಾರಿ. ಆದರೆ....' ಸಾಹೇಬರು ಶಾಂತಚಿತ್ತದಿಂದ ಹೇಳತೊಡಗಿದರು.



"ಕೂಡಲೆ ಎಕ್ಸ್ಟೆನ್ಶನ್ ರೋಡಿನಿಂದ ಒಂದು ನೀಲಿ ಬಣ್ಣದ ಮೋಟಾರು ಬಂದಿತು."

ಮೇಲೆ ಹೇಳಿದಂತೆ ಪ್ರಶ್ನೆಗಳನ್ನು ಕೇಳಿ ಸಾಹೇಬರು ಸಬ್ ಇನಸ್ಪೆಕ್ಟರರ ಕಡೆಗೆ ಹೊರಳಿದರು.

"ಮುಂಜಾನೆಯ ಹುಚ್ಚನನ್ನು ಏನು ಮಾಡಿದಿರಿ?"

"ಲಾಕಪ್ಪಿನಲ್ಲಿ ಇಟ್ಟಿದ್ದೇವೆ."

"ಆತನನ್ನು ಬಿಟ್ಟು ಬಿಡಿ"

ಸಬ್ ಇನಸ್ಪೆಕ್ಟರರು ಮೌನವಾಗಿ ಆಶ್ಚರ್ಯವನ್ನು ಪ್ರಕಟಿಸಿದರು. ಸಾಹೇಬರು ಅದನ್ನು ಕಂಡು

"ಏಕೆ, ನನ್ನ ಮಾತಿನಿಂದ ನಿಮಗೆ ಆಶ್ಚರ್ಯವಾಗುತ್ತದಲ್ಲವೆ? ಅಹುದು. ಆಶ್ಚರ್ಯವಾಗುವಂತಹ

"ಸಬ್ ಇನಸ್ಪೆಕ್ಟರರೇ, ಸತ್ತೆ, ದೊರೆತನಗಳೆಂಬವು ಮನುಷತ್ವವನ್ನು ಮರೆಯಿಸುವ ಸಾಧನಗಳಾಗಿವೆ. ಆ ಅವಸ್ಥೆಯಿಂದ ಅಂಧನಾದ ಮನುಷ್ಯನು ಎಚ್ಚರಾಗುವದು ದೂರದೋಪಾಸ್ತವಾದ ಸಂಗತಿಯಾಗಿದೆ. ಜೀವನವನ್ನು ಮರೆಯಿಸುವ ಆ ಅವಸ್ಥೆಯಲ್ಲಿ ನಾನು ಮಾಡಿದ ಒಂದು ಪಾಪದ ಕೆಲಸವನ್ನು, ಮುಂದೆ ಆಗುಹೋಗುಗಳು ಳ್ಳ ನಿಮ್ಮ ಮುಂದೆ ಹೇಳಿದರೆ ತಪ್ಪಾಗಲಿಕ್ಕಿಲ್ಲವೆಂದು ಹೇಳುತ್ತೇನೆ. ಕೇಳಿರಿ.

"ನೀವು ಇಂದು ಬಂಧಿಸಿದ ಆ ಹುಚ್ಚನು ಒಂದು ಕಾಲದಲ್ಲಿ ನನ್ನ ಆಫೀಸಿನ ಗುಮಾಸ್ತನಾಗಿದ್ದನು. ವಿನಯಶಾಲಿಯಾದ ನೌಕರ. ಬೇಕಾದ ಕೆಲಸಗಾರನವನು. ನಾನಾಗ ಇದೇ ಊರಲ್ಲಿದ್ದೆ. ಮಿಗಿಲಾದ ತಾರುಣ್ಯ, ಅಸಾಧಾರಣವಾದ ಅಧಿಕಾರಕ್ಕಾಗಿ ಎಲ್ಲರೂ ನನ್ನನ್ನು ಗೌರವಿಸುತ್ತಿದ್ದರು. ನನಗೂ ಆ ಗುಮಾಸ್ತನಿಗೂ ಸ್ನೇಹವಾಯಿತು. ಆತನೊಮ್ಮೆ ಹಿರಿಯ ಅಧಿಕಾರಿಯೆಂದು ನನ್ನನ್ನು ಮನೆಗೆ ಊಟಕ್ಕೆ ಕರೆದಿದ್ದನು. ಆತನ ಮನೆ ಮಣ್ಣುಬೂತಾಗಿಯೂ ಅಚ್ಚುಕಟ್ಟಾಗಿಯೂ ಇತ್ತು. ಅವ ನನಗೆ ತನ್ನ ಮನೆಯ ಜನರ ಪರಿಚಯ ಮಾಡಿಕೊಟ್ಟನು. ಆತನ ಹೆಂಡತಿಯು ಅಸಾಧಾರಣವಾದ ರೂಪವತಿಯೂ ಕಲಿತವಳೂ ಆಗಿದ್ದಳು. ಅವಳ ಆ ರೂಪು ನನ್ನ ಮನದಲ್ಲಿ ನಟ್ಟಿತು. ಅವಳು ಅಂದಿನ ದಿನ ಕರೀ ಶೀರೆಯನ್ನುಟ್ಟಿದ್ದಳು. ಆ ಜರಿಯ ಅಂಚಿನ ಶೀರೆಯು ಅವಳ ಚೆಲುವನ್ನು ಮತ್ತಷ್ಟು ಹೆಚ್ಚಿಸುತ್ತಿತ್ತು.

ಅಂದಿನಿಂದ ನನ್ನ ಮನಸ್ಸು ಅವಳ ವಿಷಯವಾಗಿ ಅಸ್ಥಿರವಾಯಿತು. ತಿಳಿದೋ ತಿಳಿಯದೆಯೋ ನನ್ನ ಹೃದಯದಲ್ಲಿ ಅವಳಿಗೆ ಸ್ಥಾನವನ್ನು ಕೊಟ್ಟೆ. ಹೀಗೆ ಮಾಡಿದ್ದು ತಪ್ಪೆಂದು ಮನಸ್ಸು ಹೇಳುತಿತ್ತು. ಜೀವವು ತಳಮಳಗೊಳ್ಳುತಿತ್ತು. ಆದರೂ ನಾನು ಪರಾಧೀನನಾದೆ.

ನಾನು ಬಹಳ ಸಲ ಅವರ ಮನೆಗೆ ಹೋಗಹತ್ತಿದೆ. ಹಾಗೂ ಆತನ ಸಂಬಳ, ಗ್ರೇಡು, ಹೆಚ್ಚುವದಕ್ಕೆ ವಿಶ್ವಪ್ರಯತ್ನ ಮಾಡಿದೆ. ಆತನು ತನ್ನ ಮೇಲೆ ಅನುಗ್ರಹ ಮಾಡಿದ ನನ್ನ ವಿಷಯಕ್ಕೆ ಕೃತಜ್ಞನಾದನು. ಆದರೆ ನನ್ನ ಒಳಗಿನ ಉದ್ದೇಶವು ಆತನಿಗೆ ತಿಳಿದಿರಲಿಲ್ಲ. ನಮ್ಮಿಬ್ಬರಲ್ಲಿ ಸ್ನೇಹವಾಯಿತು. ಅವಳಾದರೂ ಮಾತನಾಡಹತ್ತಿದಳು. ಹೆಂಗಸರು ಎಷ್ಟು ಜಾಣರಿದ್ದರೂ, ಹುಚ್ಚರಿರುತ್ತಾರೆ. ಅವರಿಗೆ ಜಗತ್ತಿನ ಜೀವನದ ಮರ್ಮ ತಿಳಿದಿರುವದಿಲ್ಲ. ನಾನು ಸವಿ ಸವಿ ಮಾತನಾಡ ಹತ್ತಲು ಅವಳು ಮರುಳಾದಳು. ಹಾಗೆ ನಾನುಳಿದೆ. ನನ್ನ ವಿಷಯವಾಗಿ ವಿಶ್ವಾಸವಿಟ್ಟಳು.

ಅದಾದ ಕೆಲವು ದಿವಸದ ಮೇಲೆ ಒಂದು ರಾತ್ರಿ. ಅದು ಬೆಳದಿಂಗಳ ರಾತ್ರಿ. ನಾನು ಸಹಜವಾಗಿ ಅಡ್ಡಾಡುತ್ತ ಹೋಗಿದ್ದೆ. ಊರು ಸುತ್ತಿ ಬರುತ್ತಿರಲು ಅಕಸ್ಮಾತ್ ಆಕೆಯ ಮನೆಯ ಮುಂದೆ ಬಂದೆ. ಅಂದು ಆ ಗುಮಾಸ್ತನು ಸರಕಾರೀ ಕೆಲಸದ ಸಲುವಾಗಿ ಬೇರೆಯೂರಿಗೆ ಹೋದುದು ಗೊತ್ತಿತ್ತು. ಆದರೂ ಆತ ನನ್ನು ಬೇಕೆಂತ ವಿಚಾರಿಸಿದೆ. ಇಲ್ಲವೆಂದಳು. ನಾನು ಒಳಗೆ ಹೋದೆ. ಅವಳು ಹೆದರಿದಳು. "ಬೇಡಾ ಬೇಡಾ" ಎಂದು ಮನಸ್ಸು ಹೇಳುತ್ತಿತ್ತು.

ನಾನು ಒಳಗೆ ಹೋದಾಗ ರಾತ್ರಿ ೯ ಘಂಟೆಯಾಗಿತ್ತು. ಎಷ್ಟೋ ವೇಳೆ ನಡುಮನೆಯಲ್ಲಿ ಕುಳಿತಿದ್ದೆ. ಅವಳು ಬಾಗಿಲ ಬಳಿ ನಿಂತಿದ್ದಳು. ಬಹಳ ವೇಳೆಯ ಮೇಲೆ ಹೇಳಿದೆ—"ನಾನು ಬಂದ ಉದ್ದೇಶವು ನಿನಗೆ ತಿಳಿದಿರುವದೋ"

ನನ್ನ ಮಾತಿನ ಅರ್ಥವಾಗಲಿಲ್ಲ. ಅವಳು 'ಹುಳು ಹುಳು' ಮೋರೆಯನ್ನು ನೋಡಹತ್ತಿದಳು.

"ನಿನ್ನ ಗಂಡನ ಅಧಿಕಾರವು ಸ್ಥಿರವಾಗಿರಬೇಕೆಂದು ನೀನು ಅಪೇಕ್ಷಿಸುತ್ತಿಯಲ್ಲವೆ?"

"ನಾವು ಬಡವರು. ತಮ್ಮಂಥವರ ಅನುಗ್ರಹವು ಅವಶ್ಯವು."

"ಈ ವರೆಗಿನ ನಿನ್ನ ಗಂಡನ ಹೆಚ್ಚಳವು ನನ್ನಿಂದಲೆಂಬುದನ್ನು ನೀನು ಬಲ್ಲೆ . . . .

. . ಇಂದು ನೀನು ನಾನು ಹೇಳಿದ ಹಾಗೆ ಕೇಳದಿದ್ದರೆ ಏನಾಗುತ್ತದೆಂಬದನ್ನು ಬಲ್ಲೆಯಾ — ನಿನ್ನ ಗಂಡನ ಕೆಲಸವು ಹೋಗುವದು. ನೀವು ಅನ್ನಾನ್ನಗತಿಕರಾಗುವಿರಿ. ದೇಶಾಂತರ ಮಾಡಬೇಕಾಗುವದು ನಿಮಗೆ. ಬಹಳವೇನು, ನಾನು ಅಧಿಕಾರಿ. ನಾನು ಮುನಿದರೆ . . . ನಿಮ್ಮ ಅಸ್ತಿತ್ವವೇ ಜಗತ್ತಿನಲ್ಲಿ ಇಲ್ಲದಾಗುವುದು.

. . . . ಅದಕ್ಕಾಗಿ . . . ? . . . ಅದಕ್ಕಾಗಿ? . . . . ನೀನು ಈಗ ನಾನು— ಹೇಳಿದಂತೆ ಕೇಳಬೇಕು. ಅವಳು ಅದಾವದೋ ದೃಷ್ಟಿಯಿಂದ ನೋಡುತ್ತಿದ್ದಳು. ನಾನು ಕೇಳಲಿಲ್ಲ. ನನ್ನ ಉನ್ಮಾದವು ಹೆಚ್ಚಾಯಿತು. ಅವಳು ನನ್ನ ಇಚ್ಛೆಗೆ ಒಡಂಬಡಲಿಲ್ಲ—ಆದರೆ ಮಾಡುತ್ತಾಳೇನು? ಯಾರೂ ಇಲ್ಲದ ಮನೆ. ನಾನು ಮೈ ಮೇಲೆ ಹೋಗಲು ಅವಳು ಗಾಬರಿಯಾಗಿ ಓಡಿ ಹೊರಗೆ ಹೋದಳು. ಎಷ್ಟು ಮಾಡಿದರೇನು? ನನ್ನಂತಹ ಉನ್ಮಾದನ ಮುಂದೆ ಅವಳು ತನ್ನ ಸತಿತ್ವವನ್ನು ಕಾಯ್ದುಕೊಳ್ಳಲಿಲ್ಲ.

"ಸತಿ ಪತಿಗಳಾದ ನಾವು ಅನ್ಯೋನ್ಯ ಪ್ರೇಮಿಗಳು. ನೀನು ತಿಳಿದಂತೆ ನಾನು ಅಲ್ಲ- ನಿನ್ನ ನಗು, ನಿನ್ನ-ಮಾತುಗಳನ್ನು ನಾನು ಬೇರೊಂದು ಉದ್ದೇಶದಿಂದ ನೋಡು

ತ್ತಿದ್ದೆ—ಕೇಳುತ್ತಿದ್ದೆ, ಆದರೆ" ...ಎಂದು ಅವಳು ಚಿಟ್ಟನೇ ಚೀರಿ ಕಣ್ಣುಮುಚ್ಚಿದಳು. ನಾನು ಅಲ್ಲಿಂದ ಎದ್ದು ಹೋಗುವ ವರೆಗೆ ಕಣ್ಣು ತೆರೆಯಲಿಲ್ಲ.

ಮರುದಿನ ಮುಂಜಾನೆ ೯ ಘಂಟೆಯ ಸುಮಾರಕ್ಕೆ ಆಕೆಯ ಗಂಡನು ನನ್ನ ಮನೆಯನ್ನು ವೇಗದಿಂದ ಪ್ರವೇಶಿಸಿದನು. ಅವನ ಕಣ್ಣುಗಳು ಕೆಂಪೇರಿದ್ದುವು, ಮುಖವು ರೌದ್ರವಾಗಿತ್ತು. ಆತನನ್ನು ಕಂಡು ನನಗೆ ಹೆದರಿಕೆಯಾಯಿತು.

"ಯಾಕೆ?" ನಾನು ಕೇಳಿದೆ.

"ಸಾಹೇಬರೇ. ಸಾಹೇಬರೇ. ಖೂನಿ! ಖೂನಿ! ನನ್ನ ಹೆಂಡತಿಯ ಖೂನಿಯಾಗಿದೆ. ನಿನ್ನೆ ರಾತ್ರಿ ಯಾವನೋ ನೀಚನು ನನ್ನ ಹೆಂಡತಿಯನ್ನು ಕೊಂದಿರುವನು. ಆತನು ನನ್ನ ಅನ್ನದಾತನಾದ ಸಾಹೇಬನಂತೆ. ನನ್ನ ಮೇಲೆ ಅನುಗ್ರಹ ಮಾಡುವ ಸತ್ಪುರುಷನಂತೆ. ಸಾಹೇಬರೇ, ಆತನು ಅಧಿಕಾರಿಯಂತೆ. ಅಧಿಕಾರಿ! ನನ್ನ ಪ್ರೇಮದ ತಂತುವನ್ನು ಕಡಿದನು! ಆತನು ಮನುಷ್ಯನಂತೆ. ಅವಳು ಹೇಳಿದಳು ಹಾಗೆ. ಸಾಹೇಬರೇ! ಜಗತ್ತಿನಲ್ಲಿ ಸೈತಾನ ಪ್ರಭುತ್ವದ ಮುಂದೆ ದೀನ ಹೀನರು ಬದುಕುವುದು ಕಠಿನವಾಯಿತು. ಏನು ಮಾಡಲಿ. ಯಾರಿಗೆ ಹೇಳಲಿ! ನಮ್ಮಂತಹರ ಮೊರೆಯನ್ನು ಕೇಳುವರಾರು. ದೇವರು- ದೇವರು ಕೂಡಾ- ಇಂದಿನ ಜನರ ಕೈಬಿಟ್ಟಿರುವನು. ಸಾಹೇಬರೇ, ನಾನು ನನ್ನ ಹೆಂಡತಿಯನ್ನು ಬಹಳವಾಗಿ ಪ್ರೀತಿಸುತ್ತಿದ್ದೆ. ನಾವಿಬ್ಬರೂ ಅನ್ಯೋನ್ಯ ಪ್ರೇಮಿಗಳಾಗಿದ್ದೆವು. ಆದರೆ – – ?" ಎಂದು ಆತನು ಅಳಹತ್ತಿದನು. ಆತನ ಆ ಕರುಣಾವಾಣಿಯನ್ನು ಕೇಳಿ ನನ್ನ ಹೃದಯವು ಒಡೆದು ಹೋಯಿತು.

"ಖೂನಿ?" ನಾನು ಕೇಳಿದೆ.

"ಅಲ್ಲ, ಆತ್ಮಹತ್ಯೆ. ಅಧಿಕಾರಿಗಳು ಉನ್ಮತ್ತರಿರುವರು!"

"ಅವಳು ಆತ್ಮಹತ್ಯೆ ಮಾಡಿಕೊಂಡಳೋ?"

"ಅಹುದು! ಸತ್ಪುರುಷರು ನೀಚಜನರ ತೊಂದರೆಗಾಗಿ ಜಗತ್ತನ್ನು ಬಿಟ್ಟು ಹೋಗಬೇಕಾಗುತ್ತದೆ."

"ತರುಣಾ" ನಾನು ಆತನ ಕೈ ಹಿಡಿದು ಹೇಳಿದೆ. "ಆದದ್ದು ಆಗಿಹೋಯಿತು. ಉನ್ಮಾದವು ಹಾಗೆ ಮಾಡಿಸಿತು. ಗಂಡಸು. ಹೆಂಗಸರನ್ನು- ಎಲ್ಲಾ ಹೆಂಗಸರನ್ನು ಭೋಗ್ಯ ವಸ್ತುಗಳೆಂದು ತಿಳಿಯುತ್ತಿರುವನು – ಇದೇ ತಪ್ಪು. ಹೆಣ್ಣುಮಕ್ಕಳು ನಮ್ಮಂತೆ ಮನುಷ್ಯರಿರುತ್ತಾರೆ. ಹೀಗೆ ಮಾಡುವದಕ್ಕೆ ಅಧಿಕಾರವೇ ಕಾರಣವು. ನೀನು ಶಾಂತನಾಗು ಎಂದೆ.

"ಏನು ಜೀವವು ಹೋಗಿರಲು ನಾನು ಶಾಂತನಾಗಿರಲಿಯಾ? ಶಾಂತಿ- ಶಾಂತಿ! ಇನ್ನೆಲ್ಲಿಯ ಶಾಂತಿ? ಜಗತ್ತಿನಲ್ಲಿ ಧೂರ್ತತನ ಅಳಿಯುವ ವರೆಗೆ- ಪ್ರಭುತ್ವದ ಸೈತಾನೀ ಪದ್ಧತಿಯು ನಾಶವಾಗುವ ವರೆಗೆ ಬಡ ಜೀವಿಗಳು ಶಾಂತಿಯನ್ನು ಹೊಂದಲಾರರು" ಎಂದು ಆತನು ನಗಹತ್ತಿದನು. ಆತನ ನಗು ನನಗೆ ಭೀಕರವಾಗಿ ತೋರಿತು. ನಾನು ಆತನ ಮಾತಿಗೆ ಅಂಜಿದೆ.

"ಜಗತ್ತಿನಲ್ಲಿರುವ ಜೀವಿಗಳೆಲ್ಲ ಸಮವಾದವುಗಳು- ಬಲದ ಒಗರಿನಿಂದ ಒಂದು ಜೀವನವು ಮತ್ತೊಂದು ಜೀವನವನ್ನು ಅಂಕಿತದಲ್ಲಿಟ್ಟುಕೊಳ್ಳುವದು ಹಿಂಸಾ ವೃತ್ತಿಯು- ಎಂಬ ವಿಚಾರವು ನನ್ನ ಮನದಲ್ಲಿ ಬಂದಿತು.

"ಜೀವನವು ಜೀವನವನ್ನು ವಶಮಾಡಿಕೊಳ್ಳುವದು ಪ್ರೇಮದಿಂದ ಅಲ್ಲದೆ ಬಲದಿಂದಲ್ಲವೆಂಬದನ್ನು ಆಂದಿನಿಂದ ನಾನು ಪೂರ್ಣ ತಿಳಿದುಕೊಂಡೆನು

ತನ್ನ ಹೆಂಡತಿಯು ಅಳಿದಳೆಂಬ ರೊಚ್ಚಿನಿಂದ ಆ ತರುಣನು ಹುಚ್ಚನಾಗಿ ಬಿಟ್ಟನು. ಆಗಿನಿಂದ ನಾನು ಈ ಊರು ಬಿಟ್ಟುಬಿಟ್ಟೆನು"

ಎಂದು ಸಾಹೇಬರು ಸುಮ್ಮನಾದರು. ನನಗೆ ಕತೆಯನ್ನು ಕೇಳಿ ವಿಷಾದವೆನಿಸಿತು. ಮನಸ್ಸು ಎಚ್ಚರಗೊಂಡಿತು.

ಆ ಹುಚ್ಚನನ್ನು ಬಿಟ್ಟು ಬಿಟ್ಟದ್ದಾಯಿತು. ಆತನೀಗ ಅದೇ ಸಾಹೇಬರ ಬಳಿಯಲ್ಲಿ ಆಶ್ರಯ ಹೊಂದುತ್ತಲಿದ್ದಾನೆ. ಏಕೆಂದರೆ ಸಾಹೇಬರು- ಈಗ ಪ್ರೇಮಮೂರ್ತಿಗಳಾಗಿದ್ದಾರೆ. ಅಹಿಂಸಾ ಮನೋವೃತ್ತಿಯವರಾಗಿದ್ದಾರೆ. ನಿಜವಾದ ಅಧಿಕಾರಿಗಳಾಗಿದ್ದಾರೆ. ಪ್ರೇಮವುಳ್ಳವರೇ—ಅಧಿಕಾರಿಗಳಲ್ಲವೆ?

---

# ಈ ವಾರದ ಪಂಚಾಂಗ

ಬಹುಧಾನ್ಯ ಸಂ|ರದ ಕಾರ್ತಿಕ ಶುಕ್ಲಪಕ್ಷ ದಕ್ಷಿಣಾಯನಂ ಶರದೃತುಃ

ತುಲಾ (ಬೊಂತೆಲ್) ೭ರಿಂದ ೧೨ರ ವರೆಗೆ. ಮಹಾನಕ್ಷತ್ರ ಸ್ವಾತಿ. ಒಕ್ಟೋಬರ-ನವಂಬರ

## ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 30 | ೭ | ರ೪೩\|\|\| | ಉಷಾ೫೬\| | ಧೃ೨೪ | ಗ೧೧ | ೧೨ | ೩೮\| | ಸ್ವಾ೩ರ೩೫ ಮಕರೆಚ೬\| ವಿ೩ಬು೪೧ [§ಕೃತಯುಗಾದಿಃ |
| 31 | ೮ | ಚ೪೮\|\|\| | ಶ್ರ೬೦ | ಶೂ೩೫\| | ಭ೧೬\| | ೭\| | ೩೩\|\|\| | ಶುಕ್ರವಕ್ರಾರಂಭಃ ಕಾ.ಸೋಮವಾರ† |
| 1 | ೯ | ಕು೫೩\| | ಶ್ರ೨\|\| | ಗಂ೨೬ | ಬಾ೨೧ | ೧೩\| | ೩೯\|\| | ಕುಂಭೆಚ೩೫ ವಿ೪ವೃಶ್ಚಿಕೆಬು೪೮ § [‡೧೪\|\|ಘಟಿನಂತರ ಹರಿವಾಸರಃ |
| 2 | ೧೦ | ಬು೫೬\|\|\| | ಧ೭\|\|\| | ವೃ೨೬\| | ತೈ೨೫ | ೨೭\| | ೫೩\| | ಸ್ವಾ೪ರ೫೪ [†ಅ. ಸಿ. ಯೋಗ ಶ್ರ. [*ಜಾಗ್ರಣೀ ತಪ್ತಮುದ್ರಾ. ವನ್ಸಾ. |
| 3 | ೧೧ | ಗು೫೯\| | ಶ್ರ೧೨\|\| | ಧ್ರು೨೬ | ವ೨೮ | ೨೯\|\| | ೫೫ | ಆ್ನ೧ಬು೫೬ ಸ್ಮಾರ್ತೈಕಾದಶೀ ರಾತ್ರಿ‡ |
| 4 | ೧೨ | ಶು೬೦ | ಪೂಭ೧೬\| | ವ್ಯಾ೨೪\|\|\| | ಬ೩೦ | ೪೧\| | ೦ | ಮೀನೆಚ\|\|ಹ್ರ೨ಕು೬ ಭಾ. ವೈ.೧೧* ಉತ್ಥಾನ೧೨ತುಲಸೀಪೂ. ಕ್ಷೀರಾಬ್ಧಿ |
| 5 | ೧೨ | ಶ\|\|\| | ಉಭ೧೮\|\| | ಹರ್೨೨\|\| | ಬಾ\|\|\| | ೪೯\| | ೬\| | ಉಡ್ಪಿ ದೀ. ಆರಂಭಃ ಪ್ರದೋಷಃ |

## ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 30 | ೭ | ರ೪೪ | ಉಷಾ೫೫\|\|\| | ಧೃ೨೨ | ಗ೧ | ೧೦\|\|\| | ೩೭\|\|\| | ಸ್ವಾ೩ರ೨೩ಮಕರೆಚ೫\|ವಿ೩ಬು೬೦ |
| 31 | ೮ | ಚ೫೦ | ಶ್ರ೬೦ | ಶೂ೨೪\|\| | ಭ೧೭ | ೭ | ೩೫\|\|\| | ವಕ್ರೀಶುಕ್ರಃ ವ್ಯ. ಪ್ರ.೫೯ |
| 1 | ೯ | ಕು೫೫ | ಶ್ರ೨\|\|\| | ಗಂ೨೫\|\|\| | ಬಾ೨೨\|\| | ೧೩\|\|\| | ೪೦\| | ಕುಂಭೆಚ೩೫\|\|\|ವ್ಯ.ನಿ.೧೮ ನವಂಬರ† |
| 2 | ೧೦ | ಬು೫೯ | ಧ೮\|\|\| | ವೃ೨೬\|\| | ತೈ೨೭ | ೨೮\| | ೫೪\| | ಸ್ವಾ೪ರ೪೩ವೃಶ್ಚಿಕೆಬು೧೨ |
| 3 | ೧೧ | ಗು೬೦ | ಶ್ರ೧೩\|\| | ಧ್ರು೨೬ | ವ೩೦ | ೩೦\|\|\| | ೫೬ | ಜ್ಯೊಂದಯಃಪರೆ [†ಕೃತಯುಗಾದಿಃ ಮೀನೆಚ೧. ಹ೨ಕು೧೪ ಆ್ನ೧ಬು೨೬ |
| 4 | ೧೧ | ಶು೧\| | ಪೂಭ೧೬\|\|\| | ವ್ಯಾ೨೪\|\| | ಭ೧\| | ೪೧\|\|\| | ಶೆ.\| | ಮನ್ವಾದಿಃಸರ್ವೆಷಾಂ೧೧ಭೋಧಿನಿ ಉತ್ಥಾನ೧೨ತುಳಸೀಪೂ.ಚಾ. ಮಾ. |
| 5 | ೧೨ | ಶ೧\|\|\| | ಉಭಾ೧೮\|\| | ಹರ್೨೧\|\|\| | ಬಾ೧\|\|\| | ೪೮\|\| | ೬\| | ವ್ರ. ಸ. ಶನಿಪ್ರದೋಷಃ ಮಾ. ಮೃ. |

# ಈ ವಾರದಲ್ಲಿ

# ನಿಮ್ಮ ಭವಿಷ್ಯವು ಹೇಗಿದೆ?

**ತಾರೀಕು ೩೦-೧೦-೧೯೩೪ರಿಂದ ತಾರೀಕು ೬-೧೧-೧೯೩೪ರ ವರೆಗೆ.**

**ಮೇಷ:—**

ಪ್ರಕೃತದ ಪರಿಸ್ಥಿತಿಯು ನಿಮಗೆ ಹೆಚ್ಚಿಗೆ ಅನುಕೂಲವಾಗಿಲ್ಲವಾದರೂ ಪ್ರತಿಕೂಲವಾಗಿ ನಿಲ್ಲಲಾರದು. ಗೃಹೋಪಕರಣಗಳು ವೃದ್ಧಿ ಹೊಂದುವವು. ಕ್ಷಣವೂ ಕೂಡ ನಿಂತಲ್ಲಿ ನಿಲ್ಲದೆ ಅಲೆದಾಡುವಿರಿ. ನೀವು ಎಷ್ಟೆಷ್ಟು ವಿಶೇಷವಾಗಿ ಧನವನ್ನು ಸಂಪಾದಿಸುವಿರೋ ಅದಕ್ಕೆ ತಕ್ಕಷ್ಟು ಖರ್ಚಿನ ದಾರಿಗಳು ಹೆಚ್ಚುವವು. ಈ ಸಲುವಾಗಿ ಪರರನ್ನಾಶ್ರಯಿಸಬೇಕಾಗಿಲ್ಲವು. ಸ್ತ್ರೀ ಸಂಬಂಧಿಧನವಾಗಲಿ ಯಾ ಸ್ತ್ರೀ ಮೂಲಕವಾಗಿಯಾಗಲಿ ಧನಲಾಭವಾಗುವ ಸಂಭವವಿದೆ. ಅಜೀರ್ಣ ಸಂಬಂಧವಾದ ರೋಗವು ಉಂಟಾಗುವುದು. ನಿಮ್ಮ ವಾದವಿವಾದಗಳೆಲ್ಲವೂ ಕೊನೆಗೊಂಡು ಅದರಲ್ಲಿ ನೀವೇ ವಿಜಯಿಗಳಾಗುವಿರಿ. ಆದಿಯ ೫ ದಿನಗಳು ಸರ್ವ ಭಾಗದಲ್ಲೂ ಅನುಕೂಲವಾಗಿರುವವು. ತದ್ದಿನಗಳಲ್ಲಿ ಹೊಸ ಜನರ ಪರಿಚಯ, ಇಷ್ಟಕಾರ್ಯಸಿದ್ಧಿ, ಮನಸ್ಸಿಗಾನಂದ ಇತ್ಯಾದಿಗಳುಂಟಾಗುವವು.

**ವೃಷಭ:—**

ಜನರನ್ನು ವಶೀಕರಿಸಲಿಕ್ಕೆ ಬೇಕಾದ ಬುದ್ಧಿ ಬಲವೂ ಧನಬಲವೂ ನಿಮ್ಮಲ್ಲಿ ಚೆನ್ನಾಗಿರುವುದರಿಂದ ಜನರು ನಿಮ್ಮ ಆಜ್ಞಾಧಾರಕರಾಗಿರುವರು. ನಿಮ್ಮ ಗೃಹಸಂಪತ್ತು ಕೂಡ ಬಹಳ ಉತ್ತಮ ಸ್ಥಿತಿಯಲ್ಲಿರುವುದು. ಸೇವಕ ವರ್ಗದವರಲ್ಲಿಯೂ ಪುತ್ರರಲ್ಲಿಯೂ ಕೂಡ ಚೆನ್ನಾಗಿ ದೃಷ್ಟಿಯನ್ನಿಡಬೇಕಾಗಿದೆ. ವಿರೋಧ ಬುದ್ಧಿಯು ಅವರಲ್ಲಿ ಹೆಚ್ಚುತ್ತಿದೆ. ಆರೋಗ್ಯವು ಸುಧಾರಿಸಿರುವುದು. ಸಮಾಜದಲ್ಲಿ ಗೌರವಾದರಗಳಿಗೆ ಪಾತ್ರರಾದ ನಿಮ್ಮ ಮನಸ್ಸಿಗಾನಂದವಿಹುದು. ಕಾರ್ಯಗಳಿಗೆ ಮಧ್ಯೆ ಮಧ್ಯೇ ಅನೇಕ ತೊಂದರೆಗಳು ಬಂದರೂ ಅದರಿಂದ ಪಾರಾಗುವಿರಿ. ಸ್ತ್ರೀ ಜನರಲ್ಲಿ ಕಲಹಗಳು ಹೆಚ್ಚುವುದರಿಂದ ಅನೇಕ ಭಾಗಗಳಲ್ಲಿ ವಿಘ್ನಗಳು ಬರಲಿವೆ. ತಾ ೨ರಿಂದ ೫ರ ತನಕದ ದಿನಗಳು ಸರ್ವಾಭಿಷ್ಟಫಲ ಪ್ರಧಾನಗಳಾಗಿರುತ್ತವೆ.

**ಮಿಥುನ:—**

ಕಳೆದೆರಡು ವಾರಗಳಿಂತ ಈ ವಾರವು ನಿಮಗೆ ಕೆಲವು ಭಾಗಗಳಲ್ಲಿ ಉತ್ತಮವಾಗಿ ಕಂಡು ಬರುವುದು. ಖರ್ಚಿಗೆ ಕೆಲವಂಶ ಧನ ಸಿಗುವದು. ಆದಕಾರಣದಿಂದಲೇ ಕೆಲವು ಕಾರ್ಯಗಳನ್ನು ಸಾಧಿಸುವಿರಿ. ಅದಕ್ಕೂ ಶತ್ರುಗಳ ಪೀಡೆಯು ಕಡಿಮೆಯಿಲ್ಲವು. ತಾಪ ಸಂಬಂಧವಾದ ಜ್ವರ ಮತ್ತು ಉದರ ರೋಗಗಳು ಮುಂಚಿನಂತೆಯೇ ಇರುವವು. ಕೃತ್ರಿಮ ಮಿತ್ರರಿಂದ ಮಾನ, ಧನ ಇತ್ಯಾದಿಗಳ ಹಾನಿ ಸಂಭವವಿರುವದು. ಪ್ರವಾಸದಲ್ಲಿ ನಾನಾ ತರದ ಕಷ್ಟಕ್ಕೊಳಗಾಗುವಿರಿ. 'ಊರಿಗೊಂದು ದಾರಿಯಾದರೆ ಪೋರನಿಗೊಂದು ದಾರಿ' ಎಂದಂತೆ ನಿಮ್ಮ ವರ್ತನೆಯು ಲೋಕವಿಲಕ್ಷಣವಾಗಿರುವುದು. ಆದ್ದರಿಂದಲೇ ನಿಮಗೆ ಜನರ ಪ ಮಿತ್ರರ ಬೆಂಬಲವಿಲ್ಲ. ಅಂತೆಯೇ ದೈವಾನುಕೂಲವೂ ಇಲ್ಲ. ಈ ವಾರದಲ್ಲಿ ನೀವು ಜನರಿಂದ ಕೆಟ್ಟ ಮಾತನ್ನು ಕೇಳುವಿರಿ. ತಾ ೩೦ ರಿಂದ ೩೧ರ ತನಕದ ದಿನಗಳಲ್ಲಿ ಅನಿಷ್ಟ, ರೋಗೋಪದ್ರವ, ಆಯಾಸಗಳು ಹೆಚ್ಚುವವು.

**ಕರ್ಕಾಟಕ:—**

ನಿಮ್ಮ ನಡೆನುಡಿಗಳಿಂದಲೂ ಮುಖಚರ್ಯೆಯಿಂದಲೂ ನಿಮ್ಮ ಅಂತರಂಗವನ್ನು ಥಕ್ಕನೆ ತಿಳಿದುಕೊಳ್ಳಬಹುದು. ಹೇಗಂದರೆ ಮನಸ್ಸಾಕ್ಷಿಗೆ ವಿರೋಧವಾಗಿ ನೀವು ವರ್ತಿಸುವುದರಿಂದ ಚಂಚಲವಾದ ನಿಮ್ಮ ಮನೋವಿಕಾರವು ಕಾರ್ಯದಲ್ಲಿ ತೋರಿಬರುವುದು. ನೀವು ಬೇಕಾದಷ್ಟು ಹಣ ದುಡಿದರೂ ಅದನ್ನು ನ್ಯಾಯ ಮಾರ್ಗದಲ್ಲೇ ಖರ್ಚುಮಾಡುವಿರಿ. ಆದಕಾರಣ ನಿಮ್ಮ ಸಾಂಪತ್ತಿಕ ಪರಿಸ್ಥಿತಿಯು ಬಹಳ ಮಟ್ಟಿಗೆ ಸುಧಾರಿಸಿದೆಯೆನ್ನಬಹುದು. ಅನಾರೋಗ್ಯವು ನಿಮ್ಮನ್ನು ಬಹುವಾಗಿ ಪೀಡಿಸಿದರೂ ಸಾಂಸಾರಿಕ ಭಾಗದಲ್ಲಿ ನೀವು ನಿಶ್ಚಲಚಿತ್ತರಾಗುವಿರಿ. ಸುಹೃದಯವು ನಿಮಗೆ ಬಹಳ ಸಹಕಾರಿಯಾಗಿದ್ದರೂ ಕೆಲವರೊಡನೆ ನಿಮ್ಮ ವೈರತ್ವವು ಬೆಳೆದು ಇಷ್ಟಸಿದ್ಧಿಗೆ ತೊಡಕುಂಟಾಗುವುದು. ತಾ ೩೦, ೩೧, ೧ ರಲ್ಲಿ ಸ್ತ್ರೀಧನಲಾಭ, ಗೌರವ, ಸುಖಗಳು ಲಭಿಸುವವು.

**ಸಿಂಹ:—**

ಕಳೆದ ವಾರಕ್ಕಿಂತಲೂ ಈ ವಾರವು ಕೆಲವು ಭಾಗದಲ್ಲಿ ನಿಮಗೆ ಕಷ್ಟದಾಯಕವೇ ಆಗಿರುವುದು. ಬಲವತ್ತರವಾದ ಮನೋವ್ಯಥೆಯಿಂದ ನಿದ್ರಾಹಾರಗಳು ಕಾಲಕಾಲಕ್ಕೆ ಸಿಗದೆ ಪಿತ್ಥೋಷ್ಣಗಳು ದೇಹದಲ್ಲಿ ಹೆಚ್ಚಿ ತದುದ್ರೇಕರೂಪವಾದ ರೋಗಗಳು ಶರೀರವನ್ನು ಪೀಡಿಸುವವು. ಅಧಿಕಾರಿಗಳ ಕ್ರೂರದೃಷ್ಟಿಯು ನಿಮ್ಮ ಮೇಲೆ ಬಹಳವಾಗಿರುವುದು. ಪತ್ನೀಪುತ್ರ ವಿರಹದಿಂದಾಗಿ ಹೆಚ್ಚಿನ ದುಃಖಭಾಗಿಗಳಾಗುವಿರಿ. ಆದರೂ ಅನುಕೂಲರಾದ ರವಿಶುಕ್ರರ ಬಲದಿಂದಾಗಿ ಖರ್ಚಿನ ಸಲುವಾಗಿ ಹೆರವರ ಕೈಕಾಯಬೇಕಿಲ್ಲವು. ಮಿತ್ರವರ್ಗದವರ ಭೆಟ್ಟಿಯಾಗುವುದು. ಈ ಕಾರಣದಿಂದಾಗಿಯೇ ನಿಮ್ಮಲ್ಲಿ ನವೀನ ಶಕ್ತ್ಯುತ್ಸಾಹಗಳು ಹುಟ್ಟುವವು. ತಾ. ೪, ೫ರ ಮಟ್ಟಿಗೆ ಹೆಚ್ಚಿನ ಜಾಗ್ರತೆ ವಹಿಸಿರಿ.

**ಕನ್ಯಾ:—**

ದೇಹಾಲಸ್ಯವು ಹೆಚ್ಚಿರೋಣದರಿಂದ ನೀವು ತೊಡಗಿದ ಕಾರ್ಯಗಳೆಲ್ಲವನ್ನೂ ಅಲ್ಲಲ್ಲಿಗೇ ಕೈದಿಡುವಿರಿ. ಗೃಹ ಕಲಹಗಳು ವಿಶೇಷವಾಗಿ ಪರಿಣಮಿಸುವವು. ಆದ್ದರಿಂದಲೇ ನೀವು ಬಹಳ ದುಃಖಿತರಾಗುವಿರಿ. ಆದರೂ ಗುರುಶುಕ್ರರ ಬೆಂಬಲವು ನಿಮಗಿಹುದು. ಹೆಚ್ಚಾಗಿ ಚಿಂತಿಸುವ ಕಾರಣವಿಲ್ಲ. ಜನರು ನಿಮ್ಮನ್ನು ಗೌರವಿಸುವರು. ನಿಮ್ಮ ಅಪ್ಪಣೆಯನ್ನು ಸರ್ವರೂ ಮಾನಿಸುವರು. ಇತರ ಗೃಹೋಪಕರಣಗಳೂ ಪರಿಜನಾದಿಯಾಗಿ ಪಶುಗಳವರೆಗೂ ಸುಖಿಯಾಗಿರುವರು. ವಿವಾದ ಸಂಬಂಧವಾದ ಕಾರ್ಯಗಳ ಸಲುವಾಗಿ ಹೆಚ್ಚಾಗಿ ಧನವ್ಯಯವಾಗುವುದು. ತಾ. ೩೦, ೩೧, ೧, ಈ ದಿನಗಳಲ್ಲಿ ಶೋಕವ್ಯಾಧಿಗಳಧಿಕವಾಗುವವು. ಪ್ರವಾಸವೂ ಸಂಭವಿಸಿ ಕಷ್ಟವನ್ನನುಭವಿಸುವಿರಿ.

**ತುಲಾ:—**

ಶುಭಾಶುಭ ಸ್ಥಾನಗತರಾದ ಗ್ರಹರು ಸಮಬಲರಾಗಿರೋಣದರಿಂದ ವಿಶೇಷ ರೀತಿಯ ಯಾವದೊಂದು ಕಾರ್ಯವೂ ಆಗಲಾರದು. ಆದರೂ ಕಳೆದ ವಾರಕ್ಕಿಂತ ಈ ವಾರವು ಎಷ್ಟೋ ಉತ್ತಮ ಸ್ಥಿತಿಯಲ್ಲಿರುವುದು. ವ್ಯಯಕ್ಕೆ ತಕ್ಕಂತೆ ಆಯವು ಇರುವುದರಿಂದ ಸಾಂಪತ್ತಿಕ ಭಾಗವು ಸುಧಾರಿಸಿರುವುದು. ಕೆಲವು ಕಾರ್ಯನಿರ್ವಹಣದ ಬಗ್ಗೆ ಹೆಚ್ಚಾಗಿ ಶ್ರಮಪಡಬೇಕಾಗುವುದು. ಇನ್ನೂ ಕೆಲವು ಕಾರ್ಯಗಳಲ್ಲಿ ಆಪಾತತಃ ನಿಮಗೆ ಸೋಲು ಕಂಡು ಬಂದರೂ ಅಂತತಃ ಚೆನ್ನಾಗಿ ಧನಲಾಭವಾಗುವುದು. ಗ್ರಹಸಂಪತ್ತುಗಳು ಮನಸ್ಸಿಗೆ ತೃಪ್ತಿಕರವಿದ್ದರೂ ಆರೋಗ್ಯದ ಮಟ್ಟಿಗೆ ಸುಧಾರಿಸಿಲ್ಲವು. ವಿಶ್ವಾಸಕ್ಕೆ ಪಾತ್ರರಾದ ಜನರು ವಿಶ್ವಾಸಘಾತವನ್ನು ಮಾಡೋಣದರಿಂದ ಚಿಂತಿಸುವಿರಿ. ತಾ. ೪, ೫ ಈ ದಿನಗಳಲ್ಲಿ ಕಾರ್ಯಸಿದ್ಧಿ, ಸುಖ.

**ವೃಶ್ಚಿಕ:—**

ನೀವು ಕೈಕೊಂಡ ಉದ್ಯಮವು ಫಲಕಾರಿಯಾದಲ್ಲಿ ನಿಮ್ಮ ಇಷ್ಟದಂತೆ ವಿರೋಧಿಗಳು ನಾಶವಾಗಿ ಅವರ ಸಂಬಂಧವಾದ ಧನಾದಿ ವಸ್ತುಗಳನ್ನು ಪಡೆಯುವಿರಿ ಸಹಜ. ಆದರೆ, ದೀಪದ ಬುಡದಲ್ಲಿ ಕತ್ತಲೆ ಇದ್ದಂತೆ ನಿಮ್ಮ ಸಮೀಪದ ಪರಿವಾರದೊಳಗೂ ಈ ರೀತಿಯ ಜನರೇ ಇರುವುದರಿಂದ ನಿಮ್ಮ ಶತ್ರುವಿಜಯದ ಹಂಚಿಕೆಯು ಬಯಲಾಗಿ ಕಾರ್ಯವು ಫಲಕಾರಿಯಾಗದು. ನಿಷ್ಠುರವಾಣಿಗಳಾದ ನಿಮಗೆ ಕಲಹ, ಧನವ್ಯಯ, ಮಾನಹಾನಿಗಳು ಆಗಾಗ ಸಂಭವಿಸುತ್ತವೆ. ಶರೀರದ ಆರೋಗ್ಯಸ್ಥಿತಿಯೂ ಉತ್ತಮವಾಗಿಲ್ಲವು. ಆದರೂ ಸಚ್ಚಾರಿತ್ರರಿಗೆ ಧನಲಾಭ, ಕಾರ್ಯಜಯಗಳು ಆಗಲಿವೆ. ತಾ. ೩೦, ೩೧, ೧ ಈ ದಿನಗಳು ಪ್ರಶಸ್ತವಾಗಿರುವುದರಿಂದ ಶಯನ ಸುಖ, ಸ್ತ್ರೀಸುಖ ಆಯಗಳು ಹೆಚ್ಚುವವು.

**ಧನು:—**

ಅದೃಷ್ಟಪರೀಕ್ಷೆಯ ಕಾಲವು ಬಂದದೆ. ಆಲಸ್ಯದಿಂದ ಸೋಮಾರಿಗಳಾಗಿರದೆ ಉದ್ಯಮವನ್ನು ಕೈಕೊಳ್ಳಿರಿ. ಯಾವ ಕಾರ್ಯವನ್ನು ಮಾಡಲಿಕ್ಕೂ ನೀವು ಸ್ವಯಂಸಮರ್ಥರಾಗಿರುವಿರಿ. ನಿಮಗೆ ಸ್ವೀಕೃತ ಕೆಲಸಗಳಲ್ಲಿ ವಿಶೇಷವಾಗಿ ಧನಲಾಭವಾಗುವುದು. ರಾಜಸ್ಥಾನದ ಕಾರ್ಯಗಳಲ್ಲಿ ಜಯ, ಸ್ಥಾನ, ಮಾನಗಳು ಸಿಗುವವು. ಶುಭಕಾರ್ಯಗಳೆ ಹೆಚ್ಚಾಗಿ ಜರಗುತ್ತಿರುವವು. ಸಜ್ಜನರ ಸಮಾಗಮವೂ ಆಪ್ತಮಿತ್ರರ ದರ್ಶನವೂ ಆಗುವದು. ಕಷ್ಟಪಟ್ಟಾದರೂ ಪುಣ್ಯಕ್ಷೇತ್ರಗಳ ಸಂದರ್ಶನವನ್ನು ಮಾಡಬಯಸುವಿರಿ. ಸಂಪಾದಿಸಿದ ಧನಾದಿವಸ್ತುಗಳನ್ನು ಕೂಡಿಡುವ ಬುದ್ಧಿ ನಿಮಗಿಲ್ಲವು. ಸತ್ಕ್ರಿಯಾ ಸತ್ಪಾತ್ರಗಳಲ್ಲಿ ಧನವನ್ನು ವ್ಯಯಿಸುವಿರಿ. ಆದರೂ ನಿಮಗೆ ಬಂಧುಗಳ ಸಂಬಂಧವಾದ ಚಿಂತೆಯೂ, ಭಾರ್ಯಾ ಮತ್ತು ಗೃಹಸಂಬಂಧವಾದ ಮಾನಸಿಕ ರೋಗವೂ ಉದ್ಭವಿಸುವುದು.

ತಾ. ೨, ೩ ಇವು ಸರ್ವಾನುಕೂಲ ದಿನಗಳಾಗಿವೆ.

**ಮಕರ:—**

ಈ ವಾರದಲ್ಲಿ ನಿಮಗೆ ದೇಹಾಲಸ್ಯವು ಉಂಟಾಗುವುದು. ನಿಮ್ಮ ಅವಿಚಾರದಿಂದಾಗಿ ಕೆಲವು ಕಾರ್ಯಗಳಲ್ಲಿ ಅಪಜಯವಾಗುವುದು. ಶತ್ರುಯುಕ್ತ ಮನೋರೋಗವು ನಿಮ್ಮನ್ನು ಬಾಧಿಸಬಹುದು. ಆದರೂ ಹೆಚ್ಚಿನ ಗ್ರಹರ ಅನುಗ್ರಹವು ನಿಮಗಿರುವುದರಿಂದ ಈ ದೋಷಾನಿಷ್ಟಗಳು ಕಾರ್ಯರೂಪದಲ್ಲಿ ಬರಲಾರವು. ಮಿತ್ರರ ಸಹಾಯವು ತುಂಬಾ ಇರುವುದರಿಂದ ಸ್ಥಾನ ಮಾನಗಳನ್ನು ಹೊಂದಿ ಕೀರ್ತಿಶಾಲಿಗಳಾಗುವಿರಿ. ಕಾರ್ಯದಲ್ಲಿ ಜಯವಾಗುವುದು. ಸಾಂಸಾರಿಕ ಭಾಗವು ಉತ್ತಮ ಸ್ಥಿತಿಯನ್ನೈದಿರುವುದು. ಶತ್ರುಗಳು ಪಾದಾಕ್ರಾಂತರಾಗುವರು. ತಾ. ೩೦, ೩೧, ೧ ಮತ್ತು ೪, ೫ ದಿನಗಳು ಬಹಳ ಉತ್ತಮವಿರುವುದರಿಂದ ಮೃಷ್ಟಾನ್ನ ಭೋಜನ, ವಿಶೇಷತಃ ಶುಭಗಳಾಗುವವು.

**ಕುಂಭ:—**

"ಸಾಯುವ ಕಾಲ ತಪ್ಪಿದರೂ ನೋಯುವ ಕಾಲ ತಪ್ಪದು" ಎಂದಂತೆ ನೀವು ಈ ವಾರದಲ್ಲಿ ದೇಹದಲ್ಲಿ ಹುಣ್ಣು, ಕಜ್ಜಿ ವಗೈರೆಯಿಂದಾಗಿ ಬಹಳ ಕಷ್ಟಪಡುವಿರಿ. ಹಣಕಾಸಿನ ಸಲುವಾಗಿ ಕಲಹವು ಹೆಚ್ಚುವದು. ಅತ್ಯಲ್ಪ ಕಾರಣದಿಂದಾಗಿ ಸ್ವಕೀಯ ಪರಕೀಯ ಜನಗಳಲ್ಲಿ ಮನೋವೈಷಮ್ಯವುಂಟಾಗುವುದು. ಬಾಹ್ಯ ಸುಖವಾಗಲಿ ಆಂತರಿಕ ಸುಖವಾಗಲಿ ಯಾವತ್ತು ಇಲ್ಲವು. ದೇಹದಲ್ಲಿ ಕಾರ್ಯಕರ್ತೃತ್ವ ಶಕ್ತಿಯು ಕಡಿಮೆಯಾಗಿ ದುರ್ಬಲವಾಗಿರುವುದು. ಮಾತ್ರವಲ್ಲ, ರೋಗ ಪೀಡಿತವಾಗುವುದು. ಸಮಾಜದಲ್ಲಿ ಗೌರವಹೀನರಾದ ನಿಮ್ಮನ್ನು ಎಲ್ಲರೂ ತಿರಸ್ಕರಿಸುವರು. ತಾ. ೨. ೩.ರಲ್ಲಿ ಧನಲಾಭ ಸ್ತ್ರೀಸುಖ ಇತ್ಯಾದಿಗಳು ಲಭಿಸುವವು. ಇತರ ದಿನಗಳಲ್ಲಿ ಹೆಚ್ಚಿನ ಜಾಗರೂಕತೆಯುಂದಿರುವದು ಲೇಸು.

**ಮೀನ:—**

ನಿಮಗೂ ಹಿಂದಿನ ರಾಶಿಯವರಿಗೂ ಯಾವ ಭಾಗದಲ್ಲೂ ಹೆಚ್ಚಿನ ಅಭ್ಯಂತರಗಳು ಬರಲಾರವು. ಆರೋಗ್ಯ ವಿಷಯವು ಬಹಳ ದೂರವಸ್ಥೆಯನ್ನು ಹೊಂದಿರುವುದು. ಶತ್ರುಗಳ ಉಪದ್ರವು ಅತಿರೇಕವಾಗುವುದು. ಗೃಹದಲ್ಲಿ ಸುಖವಿಲ್ಲವು. ಪತ್ನಿಯು ಎಲ್ಲಾ ವಿಧಗಳಲ್ಲೂ ಪ್ರತಿಕೂಲಳಾಗಿ ಚಂಡಿಯಂತೆ ವರ್ತಿಸುವಳು. ಪರದೇಶಾಟನದ ಪ್ರಸಂಗ ಒದಗಿ ಬಹಳ ಕಷ್ಟನಷ್ಟಗಳಿಗೆ ಗುರಿಯಾಗುವಿರಿ. ಕೆಲವೊಮ್ಮೆ ಶತ್ರುಗಳಿಗೂ ಕೂಡ ಶರಣು ಹೋಗಬೇಕಾಗುವುದು. ವ್ಯಾಪಾರಿಗಳಿಗೆ ಕೂಡ ಕಷ್ಟಕ್ಕೆ ತಕ್ಕದಾಗಿ ಲಾಭವಿಲ್ಲವು. ಅಂತೂ ಸ್ವಾರ್ಥಕ್ಕಾಗಿ ಹೆಚ್ಚಿನ ಧನವ್ಯಯವಾಗುವುದು. ಮನಸ್ಸಿನಲ್ಲೊಂದು ಭಯವು ಕೆಲವು ದಿನಗಳಿಂದ ಅಂಟಿಕೊಂಡಿರುವುದು. ಆದರೂ ಗುರ್ವನುಗ್ರಹವಿರುವುದರಿಂದ ಹೆಚ್ಚು ಕಷ್ಟನಷ್ಟಗಳು ಸಂಭವಿಸವು. ತಾ. ೨. ೩. ಬಹಳ ಕಷ್ಟದಾಯಕಗಳಾಗಿವೆ.

—ಬಾಲಭಾಸ್ಕರ

---

**ಗೆಳೆಯರ ತಂಡದ ಸದಸ್ಯರಾಗುವವರು ಅಂತರಂಗದ ಕೆಳಗಿನ ಕೂಪನಿನಲ್ಲಿ ಬರೆಯಬೇಕು.**

## ಗೆಳೆಯರ ತಂಡದ ಸದಸ್ಯತನದ ಪತ್ರ.

ನಾನು 'ಗೆಳೆಯರ ತಂಡ'ಕ್ಕೆ ಸೇರಲಿಚ್ಛಿಸುತ್ತೇನೆ. ಆ ಬಗ್ಗೆ ಸದಸ್ಯತನದ ಆರು ತಿಂಗಳ ವರ್ಗಣಿಯಾದ ನಾಲ್ಕಾಣೆಯನ್ನು ಕಳುಹಿಸಿರುತ್ತೇನೆ.

ಹೆಸರು. . . . . . . . . . . . . . . . . . . . .

ವಿಳಾಸ. . . . . . . . . . . . . . . . . . . . .

ಉದ್ಯೋಗ. . . . . . . . . . . . . . . . . . . . .

ಸಹಿ. . . . . . . . . . . . . . . . . . . . .

**Printed and published by P. Venkataramanacharya for and on behalf of SUPPLY AGENCY LTD., at Manipal Power Press, Udipi.**